WPP-47

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೭ | ಬೆಂಗಳೂರು, ಗುರುವಾರ, ಜೂನ್ ೨೮, ೨೦೧೨ (ಆಷಾಢ ೭, ಶಕ ವರ್ಷ ೧೯೩೪) | ಸಂಚಿಕೆ ೨೬ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನ ಚಿತ್ತವಾಡಗಿ ಮಧ್ಯಮ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ ಸನೀಇ 108 ಮಸಾವಿ 2010 ದಿನಾಂಕ 28–09–2011.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–6/2012–13/2434, ದಿನಾಂಕ : 25–04–2012
3. ಸರ್ಕಾರದ ಆದೇಶ ಸಂಖ್ಯೆ: ಸನೀಇ 117 ಮಸಾವಿ 2011 ದಿನಾಂಕ : 27–01–2012.

**ಪ್ರಸ್ತಾವನೆ :**

ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನ ಚಿತ್ತವಾಡಗಿ ಮಧ್ಯಮ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯು 13ನೇ ಹಣಕಾಸು ಅಯೋಗದ ಅನುದಾನದಡಿ ಕೆರೆಗಳ ಹಾಗೂ ಪಾರಂಪರಿಕ ಜಲಕಾಯಗಳ ಪುನರುಜ್ಜೀವನ ಯೋಜನೆಯಡಿ ಉಲ್ಲೇಖ (1)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಅನುಮೋದನೆಗೊಂಡಿರುವ ಕಾಮಗಾರಿಗಳ ಕ್ರಿಯಾ ಯೋಜನೆಯ ಪಟ್ಟಿಯಲ್ಲಿ ಸೇರಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಉಲ್ಲೇಖ 3ರಲ್ಲಿನ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| **ಮೂಲ ಪ್ರಕಟಣೆ** | |
| ರಾಜ್ಯ ಟೆಂಡರ್ ಬುಲೆಟಿನ್ | 09–01–2012 |
| ಕನ್ನಡ ಪ್ರಭ ದಿನಪತ್ರಿಕೆ | 07–01–2012 |
| **ಅಂತಿಮ ತಿದ್ದುಪಡಿ ಪ್ರಕಟಣೆ** | |
| ರಾಜ್ಯ ಟೆಂಡರ್ ಬುಲೆಟಿನ್ | 03–03–2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುವುದಾಗಿ ವರದಿಯಾಗಿರುತ್ತದೆ. ಇವರ ಆರ್ಥಿಕ ಬಿಡ್ ಅನ್ನು ದಿನಾಂಕ: 09–04–2012ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 3,96,29,373/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 3,92,02,530/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೇಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| | ಶ್ರೀ ಉದಯ ಶಿವಕುಮಾರ ರಾಜಣ್ಣ 1ನೇ ದರ್ಜೆ ಗುತ್ತಿಗೆದಾರರು | 4,95,09,775/– | 24.93 ಹೆಚ್ಚು | 26.29 ಹೆಚ್ಚು |

ಮೇಲ್ಕಂಡಂತೆ ಶ್ರೀ ಉದಯ ಶಿವಕುಮಾರ ರಾಜಣ್ಣ 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು, ಇವರ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 26.29 ರಷ್ಟು ಹೆಚ್ಚಾಗಿದ್ದು. ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ 3,92,02,530/– ಗಳ ಮೇಲೆ ಶೇ. 11.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 4,37,10,821/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 22 ಕೆಜಿದು (ತಾಂತ್ರಿಕ) 2012, ಬೆಂಗಳೂರು, ದಿನಾಂಕ: 09–05–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನ ಚಿತ್ತವಾಡಗಿ ಮಧ್ಯಮ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ 3,92,02,530/–ಗಳ ಮೇಲೆ ಶೇ. 11.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 4,37,10,821/– ಗಳಿಗೆ (ನಾಲ್ಕು ಕೋಟಿ ಮೂವತ್ತೇಳು ಲಕ್ಷ ಹತ್ತು ಸಾವಿರದ ಎಂಟುನೂರು ಇಪ್ಪತ್ತೊಂದು ಮಾತ್ರ) ಶ್ರೀ ಉದಯ ಶಿವಕುಮಾರ್ ರಾಜಣ್ಣ, 1ನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1510 ಜಲ ಸಂಪೂನ್ಮೂಲ ಇಲಾಖೆ (ಸಣ್ಣ ನೀರಾವರಿ),

## ಕಂದಾಯ ಸಚಿವಾಲಯ

### ತಿದ್ದೋಲೆ

ಸಂಖ್ಯೆ: ಕಂಇ 01 ಮುಸರ 2011 ಬೆಂಗಳೂರು, ದಿನಾಂಕ: 18–05–2012

ಸರ್ಕಾರಿ ಆದೇಶ ಕಂಇ 139 ಮುಸರ 2008 ದಿನಾಂಕ: 28–01–2010ರಲ್ಲಿ "ಉಡುಪಿ ಜಿಲ್ಲೆ, ಕುಂದಾಪುರ ವಿಧಾನಸಭಾ ಕ್ಷೇತ್ರ" ಎಂಬುದರ ಬದಲಾಗಿ "ಉಡುಪಿ ಜಿಲ್ಲೆ ಬೈಂದೂರು ವಿಧಾನಸಭಾ ಕ್ಷೇತ್ರ ಎಂಬುದನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿಆರ್ ನಂ. 1519 ಕಂದಾಯ ಇಲಾಖೆ. (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಂ.ವಿ. ಕಲ್ಲೂರ್ ಮಠ ತಹಶೀಲ್ದಾರ್, ಯಲ್ಲಾಪುರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರಿಗೆ ಸ್ಥಗಿತ ವೇತನ ಬಡ್ತಿಯನ್ನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಆರ್.ಡಿ. 702 ಎಎಸ್‌ಡಿ 2010, ದಿನಾಂಕ: 20–06–2011.

2. ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಇವರ ಪತ್ರ ಸಂಖ್ಯೆ: ಕಂಶಾ/ಸಿಬ್ಬಂದಿ(1)/ವಿವ-278/2011-12, ದಿನಾಂಕ: 01-03-2012.
3. ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ. 03 ಎಫ್‌ಆರ್‌ಪಿ 96, ದಿನಾಂಕ: 18-03-1996.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ.(1)ರ ದಿನಾಂಕ: 20-06-2011ರ ಆದೇಶದಲ್ಲಿ ಶ್ರೀ ಎಂ.ವಿ. ಕಲ್ಲೂರ್ ಮಠ, ತಹಶೀಲ್ದಾರ್ ರವರಿಗೆ ದಿನಾಂಕ: 01-12-2010 ರಿಂದ ಅನ್ವಯವಾಗುವಂತೆ ಮೊದಲ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ.(2), ದಿನಾಂಕ: 01-03-2012 ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ ಇವರು ಶ್ರೀ ಎಂ.ವಿ. ಕಲ್ಲೂರ್ ಮಠ ತಹಶೀಲ್ದಾರ್, ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲವೆಂದು ತಿಳಿಸಿ, ಶ್ರೀಯುತರ ಸೇವಾ ಪುಸ್ತಕವನ್ನು ಲಗತ್ತಿಸಿ, ಇವರ ವೇತನ ಶ್ರೇಣಿ ರೂ. 11,400-21,600 ಇದ್ದು ಗರಿಷ್ಠ ಹಂತ ತಲುಪಿರುವುದರಿಂದ ದಿನಾಂಕ: 01-12-2011 ರಿಂದ ಅನ್ವಯವಾಗುವಂತೆ ಎರಡನೇ ಸ್ಥಗಿತ ಬಡ್ತಿಗಳನ್ನು ಮಂಜೂರಿ ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (3)ರ ದಿನಾಂಕ: 18-03-1996 ರ ಆದೇಶದನ್ವಯ ಸದರಿ ಪ್ರಕರಣ ಪರಿಶೀಲಿಸಿ, ಶ್ರೀ ಎಂ.ವಿ. ಕಲ್ಲೂರ್ ಮಠ ತಹಶೀಲ್ದಾರ್, ಯಲ್ಲಾಪುರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ, ಇವರ ಸೇವೆ ತೃಪ್ತಿಕರವಾಗಿರುವುದರಿಂದ ದಿನಾಂಕ: 01-12-2011 ರಿಂದ ಅನ್ವಯವಾಗುವಂತೆ ಎರಡನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 130 ಎಎಸ್‌ಡಿ 2012 ಬೆಂಗಳೂರು, ದಿನಾಂಕ: 22-05-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಂ.ವಿ. ಕಲ್ಲೂರ್ ಮಠ ತಹಶೀಲ್ದಾರ್, ಯಲ್ಲಾಪುರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ, ಇವರಿಗೆ ದಿನಾಂಕ: 01-12-2011 ರಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ. 11,400-21,600 ರಲ್ಲಿ ಎರಡನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ವಿ. ರಾಮಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ. (ಸೇವೆಗಳು-3)

ಪಿಆರ್ ನಂ. 1520

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಮೌಲ್ಯಮಾಪನ ನಿಯಮ ಮತ್ತು ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರದಲ್ಲಿನ ಸಂಶೋಧನಾ ಸಹಾಯಕರ ಹುದ್ದೆಗಳನ್ನು ಮೌಲ್ಯಮಾಪನಾಧಿಕಾರಿ ಹುದ್ದೆಗಳಿಗೆ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಪಿ.ಡಿ. 8 ಇವಿಎನ್(2) 2011, ದಿನಾಂಕ: 11-07-2011.
2. ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 07-12-2011 ರಂದು ನಡೆದ ಸಾಮಾನ್ಯ ಮಂಡಳಿ ಸಭೆಯ ನಡವಳಿ.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಸರ್ಕಾರವು ಸರ್ಕಾರಿ ಆದೇಶ ಸಂಖ್ಯೆ: ಪಿಡಿ 8 ಇವಿಎನ್(2) 2011, ಬೆಂಗಳೂರು ದಿನಾಂಕ: 11-07-2011ರ ಮೇರೆಗೆ "ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರ" ಎಂಬ ಹೊಸ ಯೋಜನೆಯನ್ನು 2011-12ನೇ ಸಾಲಿನಿಂದ ಜಾರಿಗೆ ಬರುವಂತೆ ಮಂಜೂರ ಮಾಡಿದೆ. ನಂತರ ರಾಜ್ಯ ಮಟ್ಟದಲ್ಲಿ ಮೆಮೋರ್‍ಯಾಂಡಮ್ ಆಫ್ ಅಸೋಸಿಯೇಷನ್‌ನೊಂದಿಗೆ 'ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರ' (ಕೆಇಎ)ವನ್ನು ಸ್ಥಾಪಿಸಲು ಸಲುವಾಗಿ ಹಾಗೂ ಅದನ್ನು ಕರ್ನಾಟಕ ಸೋಸೈಟೀಸ್ ರಿಜಿಸ್ಟ್ರೇಶನ್ ಆ್ಯಕ್ಟ್ 1960ರ ಅಡಿಯಲ್ಲಿ ನೋಂದಾಯಿಸುವ ಸಲುವಾಗಿ ಸರ್ಕಾರಿ ಆದೇಶ ಸಂಖ್ಯೆ: ಪಿಡಿ 20 ಇವಿಎನ್ 2011, ಬೆಂಗಳೂರು ದಿನಾಂಕ: 05.11.2011ರಲ್ಲಿ ಕರ್ನಾಟಕ ಸರ್ಕಾರವು ತಕ್ಷಣದಿಂದ ಜಾರಿಗೆ ಬರುವಂತೆ ಮಂಜೂರಾತಿ ನೀಡಿದೆ. ಅದರನ್ವಯ ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರ (ಕೆಇಎ) ವನ್ನು ಕರ್ನಾಟಕ ಸೋಸೈಟೀಸ್ ರಿಜಿಸ್ಟ್ರೇಶನ್ ಆ್ಯಕ್ಟ್ 1960ರ ಅಡಿಯಲ್ಲಿ ದಿನಾಂಕ: 19-09-2011 ರಂದು ನೋಂದಾವಣೆ ಸಂಖ್ಯೆ: ಡಿಆರ್‌ಬಿ-ಸಿ/ಎಸ್‌ಒಆರ್/140/2011-12ಯೊಂದಿಗೆ ನೋಂದಾಯಿಸಲಾಗಿದೆ.

ಮೇಲೆ ಓದಲಾದ (2)ರ ನಡವಳಿಯಲ್ಲಿ ತೆಗೆದುಕೊಂಡ ನಿರ್ಣಯದಂತೆ ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರದ ಪ್ರೋಗ್ರಾಮ್‌ವಿಂಗ್‌ನಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಪಿಡಿ 8 ಇವಿಎನ್(2) 2011, ಬೆಂಗಳೂರು ದಿನಾಂಕ: 11-07-2011ರ ಸೃಜಿಸಲಾದ 11 ಹುದ್ದೆಗಳಲ್ಲಿ ಸಂಶೋಧನಾ ಸಹಾಯಕರು (ರೂ. 11400-21600) ಎಂಬ 4 ಹುದ್ದೆಗಳಿದ್ದು ಅವುಗಳಲ್ಲಿ 2 ಸಂಶೋಧನಾ ಹುದ್ದೆಗಳನ್ನು ಮೌಲ್ಯಮಾಪನಾಧಿಕಾರಿ (ರೂ. 15600-39000): ವೇತನ ಶ್ರೇಣಿರಹಿತ) ಎಂಬ ಹುದ್ದೆಗೆ ಮೇಲ್ದರ್ಜೆಗೇರಿಸಿ ಅವುಗಳನ್ನು ಪ್ರೊಕ್ಯೂರ್‌ಮೆಂಟ್ ಆಫೀಸರ್ ಹಾಗೂ ಪ್ರಾಜೆಕ್ಟ್ ಫಾರ್ಮುಲೇಶನ್ ಮತ್ತು ಮಾನಿಟರಿಂಗ್ ಸ್ಪೆಷಲಿಸ್ಟ್ ಎಂಬುದಾಗಿ ಮರುನಾಮೀರಿಸಬೇಕೆಂದು ನಿರ್ಣಯ ಕೈಗೊಳ್ಳಲಾಗಿರುವುದರಿಂದ ಇದರ ಬಗ್ಗೆ ಕೂಡಲೇ ಸರ್ಕಾರಿ ಆದೇಶವನ್ನು ಹೊರಡಿಸಬೇಕೆಂದು ಮುಖ್ಯ ಮೌಲ್ಯಮಾಪನ ಅಧಿಕಾರಿ, ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರಿಯವರು ಪ್ರಧಾನ ಕಾರ್ಯದರ್ಶಿಯವರನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಪಿಡಿ 14 ಇವಿಎನ್ 2012 ಬೆಂಗಳೂರು, ದಿನಾಂಕ: 25-05-2012**

ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರದಲ್ಲಿರುವ 04 ಸಂಶೋಧನಾ ಸಹಾಯಕರು (ರೂ. 11400–21600) ಹುದ್ದೆಗಳ ಪೈಕಿ 2 ಹುದ್ದೆಗಳನ್ನು ಮೌಲ್ಯಮಾಪನಾಧಿಕಾರಿ (ರೂ. 15600–39000: ವೇತನ ಶ್ರೇಣಿರಹಿತ) ಎಂಬ ಹುದ್ದೆಗಳಿಗೆ ಮೇಲ್ದರ್ಜೆಗೇರಿಸಿ ಇವುಗಳಲ್ಲಿ ಒಂದು ಹುದ್ದೆಯನ್ನು ಪ್ರೊಕ್ಯೂರ್‌ಮೆಂಟ್ ಆಫೀಸರ್ ಎಂದು ಇನ್ನೊಂದನ್ನು ಪ್ರಾಜೆಕ್ಟ್ ಫಾರ್ಮುಲೇಶನ್ ಮತ್ತು ಮಾನಿಟರಿಂಗ್ ಸ್ಪೆಷಲಿಸ್ಟ್ ಎಂದು ಮರುಪದನಾಮೀಕರಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2012–13ನೇ ಸಾಲಿನಲ್ಲಿ ಸದರಿ ಪ್ರಾಧಿಕಾರಕ್ಕೆ ಒದಗಿಸಿರುವ ಅನುದಾನದಿಂದ ಈ ಹುದ್ದೆಗಳ Incremental Salary cost ಭರಿಸುವ ಷರತ್ತಿಗೊಳಪಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 164 ವೆಚ್ಚ–6/2012 ದಿನಾಂಕ: 22–05–2012ರ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಉಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ–1 ಮತ್ತು 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

ಪಿಆರ್ ನಂ. 1521

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ತಿದ್ದುಪಡಿ**

ಸಂಖ್ಯೆ: ಯೋಇ 69 ಯೋವಿವಿ 2011 ಬೆಂಗಳೂರು, ದಿನಾಂಕ: 22–05–2012

ಸರ್ಕಾರದ ಆದೇಶ ಸಂಖ್ಯೆ: ಯೋಇ 69 ಯೋವಿವಿ 2011 ದಿನಾಂಕ: 07–03–2012 ರ ಅನುಬಂಧ – 2ರ ಕ್ರಮ ಸಂಖ್ಯೆ: 6 ರಲ್ಲಿ ರಾಯಚೂರು ಜಿಲ್ಲೆ (ಕ್ರಮ ಸಂಖ್ಯೆ: 2ರಲ್ಲಿ) **"ಎನ್. ಶಂಕ್ರಪ್ಪ"** ಎಂದು ಮುದ್ರಿತವಾಗಿರುವುದನ್ನು ಡಿ.ವಿ. ಸದಾನಂದಗೌಡ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ.

ಪಿಆರ್ ನಂ. 1522

## LABOUR SECRETARIAT

**Sub:** Implementation of "Indo German Technical Cooperation" [GTZ]" Indo German International Cooperation' [GIZ] on Social Security Benefits for the un-organized Workers in Karnataka and extension of implementation agreement period from Dec-2011 to Nov-2013.

**Read:**
1. Letter Dated: 05-08-2008, from project Coordinator GIZ/Social Security programme, programme Office, Bangalore.
2. G.O. No. LD 114 LMW 2007, Bangalore, Dated: 11-03-2009.
3. Letter No. M-21021/45/2008-RW of Ministry of Labour & Employment, New Delhi, Dated; 15-12-2011.

**PREAMBLE:**

In the $10^{th}$ Five year plan, the Central Govt., gave considerable importance to Social Security Schemes, particularly for the Un-organized sector workers. The Karnataka Government too recognized that there is a need to find effective ways to extend social security to Un-organized workers who are not covered under social protection.

Hence, the Karnataka Government proposed project on Social security benefits for Un-organized workers to receive technical support from German International Cooperation [GIZ] under the title "German international Co-operation Project" [GIZ] on design and implementation of Social security benefits for Un-organized sector workers in Karnataka, India.

The main objectives of the project are to achieve, enhanced mix of appropriate and innovative social security products, improved mobilization of costs from workers benefiting from social security, effective channels of delivering of social security benefits are tested and implemented, greater convergence of existing formal social security schemes, improved capacity of delivery mechanisms and improved Private Public partnership in the delivery of social security benefits.

The projects is being executed through the Department of Labour, Government of Karnataka and German International Cooperation [GIZ]. The GIZ in India on behalf of Federal Ministry for Economic Co-operation and Development, Germany is the

aiding agency to which the project is posed. The total project cost was estimated at 6 million Euros in foreign currency. The extent of external aid to this projects is 100%. There is no State or Central share. The duration of the project was about 5 years.

The proposal was approved by State Level Co-ordination Committee on 30-01-2008. Hence approval of the Cabinet was soliciated to implement the above project and to authorise the Secretary, Labour Department to sign the M.O.U.

Accordingly Implementation agreement was entered into between Government and Karnataka [GOK] and German International Co-operation [GIZ] on 17-12-2008. Since 2009, the Department of Labour, Government of Karnataka is implementing this project on Social Security Benefits in Karnataka State with financial and technical collaboration with the German International Co-operation.

The initial implementation agreement was signed by DOL/GOK and the GIZ during Dec-2008 and the implementation period was for a period of 3 years from Dec-2008 to Nov-2011. Since considerable time was taken for completion of initial administrative procedures in implementing the project and to achieve the agreed upon objective of the project, it was felt necessary to extend the project from Dec-2011 till 2013. Accordingly the Secretary to Govt., Department of Labour, GOK sent a no cost extension proposal from December 2011 to November 2013 to the Department of Economic Affiars, GOI on 15-11-2011 for its approval.

Ministry of Labour & Employment, New Delhi, vide their letter dated: 15-12-2011 read at [3] above & the Department of Economic Affiars, has conveyed its approval for no cost extension of the project from December 2011 to November 2013. Hence this order.

**Government Order No. LD 21 LMW 2012 Bangalore, Dated: 20-04-2012**

In view of the above, approval of Government is accorded to extend the period of implementation "Indo German International Co-operation" [GIZ] project on Social Security Benefits for the Un-organized Workers in Karnataka from Dec-2011 to Nov-2013 without any additional financial burden to State Government and also to execute the revised implementation agreement accordingly.

By order and and in the name of the Governor of Karnataka

**N.R. PRABHU**

Under Secretary to Government

Labour Department

PR No. 1523

## ಕಂದಾಯ ಸಚಿವಾಲಯ

**ವಿಷಯ:** ಮೆ. ಸರ್ಜಾನ್ ರಿಯಾಲಿಟಿಸ್ ಲಿಮಿಟೆಡ್ ಬೆಂಗಳೂರು ಇವರು ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಸಲುವಾಗಿ ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನ ವಿವಿಧ ಗ್ರಾಮಗಳಲ್ಲಿ ಭೂ ಮಂಜೂರಾತಿ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ:78 ಎಲ್‌ಜಿಪಿ:2009, ದಿ:4–1–2011
2) ಸರ್ಕಾರದ ಆದೇಶ ಸಂಖ್ಯೆ:ಇಎನ್:246:ಎನ್‌ಸಿಇ:2010 ದಿ:15–5–2011.
3) ಪ್ರಾದೇಶಿಕ ಆಯುಕ್ತರು ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್/48/ 11–12, ದಿ: 18–8–2011
4) ಜಿಲ್ಲಾಧಿಕಾರಿ, ದಾವಣಗೆರೆ ಇವರ ಪತ್ರ ಸಂಖ್ಯೆ:ಎಲ್‌ಎನ್‌ಡಿ:ಸಿಆರ್: 314:2010–11, ದಿನಾಂಕ:10–4–2012.

**ಪ್ರಸ್ತಾವನೆ:**

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನಲ್ಲಿ 34.8 ಮೆ.ವ್ಯಾಟ್ ರಿಂದ 77.4 ಮೆ.ವ್ಯಾಟ್ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸಲು ಮೆ:ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿತ್ತು.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರು ಮೇಲೆ (1)ರಲ್ಲಿ ಓದಲಾದ ದಿ: 18–8–2011ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಇ.ಡಿ.ಎಲ್ ಇವರು ಗಾಳಿಯಂತ್ರದಿಂದ 77.4 ಮೆ.ವ್ಯಾಟ್ ಸಾಮರ್ಥ್ಯದ ವಿದ್ಯುತ್ ಉತ್ಪಾದಿಸುವ ಯೋಜನೆ ಅನುಷ್ಠಾನಗೊಳಿಸಲು ಮೆ: ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್ ಇವರಿಗೆ ಉಪಗುತ್ತಿಗೆ ರೂಪದಲ್ಲಿ ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕು, ಹರಪನಹಳ್ಳಿ, ಮಾಚಿಹಳ್ಳಿ, ಅಡವಿಹಳ್ಳಿ, ಗುಂಡಗತ್ತಿ, ಕಂಭತ್ರಹಳ್ಳಿ, ಸೇವಾನಗರ ಮತ್ತು ಕ್ಯಾರೆಕಟ್ಟೆ ಗ್ರಾಮಗಳ ಸಿ ಮತ್ತು ಡಿ ವರ್ಗದ ಮತ್ತು ಸತ್ತೂರು ಮತ್ತು ಉಚ್ಚಂಗಿದುರ್ಗ ಗ್ರಾಮಗಳಲ್ಲಿನ ಒಟ್ಟು 99.557 ಹೆಕ್ಟೇರ್ ಜಮೀನನ್ನು ಕೆ.ಆರ್.ಇ.ಡಿ.ಎಲ್ ಸಂಸ್ಥೆಗೆ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಲು ಕೋರಿರುತ್ತಾರೆ.

ಮಂಜೂರಾತಿಗಾಗಿ ಪ್ರಸ್ತಾಪಿಸಿರುವ ಉಚ್ಚಂಗಿದುರ್ಗ ಗ್ರಾಮದ ಸ.ನಂ.399ಇಪಿ1ರ ಜಮೀನು ಪುರಾತತ್ವ ಇಲಾಖೆಯ ಅಧೀನಕ್ಕೆ ಒಳಪಟ್ಟಿರುತ್ತದೆ. ಸತ್ತೂರು ಗ್ರಾಮದ ಸ.ನಂ.212 ಮತ್ತು ಸೇವಾನಗರ (ಯಡಿಹಳ್ಳಿ) ಗ್ರಾಮದ ಸ.ನಂ.253, ಮಾಚಿಹಳ್ಳಿ ಸ.ನಂ.353, ಹೊಸ ನಂ.382, ಕ್ಯಾರಗಟ್ಟೆ ಸ.ನಂ

321/ಎ ಮತ್ತು ಗುಂಡುಗತ್ತಿ ಗ್ರಾಮದ ಸ.ನಂ.324ರ ಜಮೀನು ಅರಣ್ಯ ಇಲಾಖೆಗೆ ಸೇರಿದ ಜಮೀನುಗಳಾಗಿರುವುದರಿಂದ ಸದರಿ ಜಮೀನುಗಳನ್ನು ಮಂಜೂರು ಮಾಡಲು ನಿಯಮಗಳಲ್ಲಿ ಅವಕಾಶ ಇರುವುದಿಲ್ಲ. ಉಳಿದಂತೆ ಹರಪನಹಳ್ಳಿ ಗ್ರಾಮದ ಸ.ನಂ492/ಎಪಿ1ರಲ್ಲಿ 22.77, ಸ.ಂ.492ಬಿಪಿ1ರಲ್ಲಿ 2315.93ಎಕರೆ ಮತ್ತು ಕಂಭಟ್ರಹಳ್ಳಿ ಗ್ರಾಮದ ಸ.ನಂ.1 ರಲ್ಲಿ 267.69 ಎಕರೆ ಜಮೀನು U.A.W (ತ.ಕ.ಪಂರಂಭೋಕು) ಆಗಿದ್ದು, ಅಡವಿಹಳ್ಳಿ ಗ್ರಾಮದ ಸ.ನಂ.379/ಎಪಿ3ರಲ್ಲಿ 808.25 ಎಕರೆ ಕಂದಾಯ ಇಲಾಖೆ ಎಂದು ಖಾತೆ ಇದ್ದು ಇವುಗಳ ಪೈಕಿ ಹರಪನಹಳ್ಳಿ ಗ್ರಾಮದ ಸ.ನಂ 492/ಎಪಿ1 ಮತ್ತು 492/ಬಿಪಿ1ರಲ್ಲಿ 78.04 ಎಕರೆ, ಕಂಭಟ್ರಹಳ್ಳಿ ಗ್ರಾಮದ ಸ.ನಂ.1ರಲ್ಲಿ 17.34 ಎಕರೆ, ಅಡವಿಹಳ್ಳಿ ಗ್ರಾಮದ ಸ.ನಂ. 379/ಎಪಿ3 ರಲ್ಲಿ 19.70 ಎಕರೆ ಒಟ್ಟು 115.08 ಎಕರೆ ಪ್ರದೇಶವು ಗಾಳಿ ಆಧಾರಿತ ವಿದ್ಯುತ್ ಘಟಕ ಸ್ಥಾಪಿಸಲು ಲಭ್ಯವಿದ್ದು, ಪ್ರಸ್ತಾಪಿತ ಜಮೀನುಗಳು ಎತ್ತರದ ಪ್ರದೇಶಗಳಲ್ಲಿದ್ದು, ಗ್ರಾಮದ ಜಾನುವಾರುಗಳಿಗೆ ಬೇರೆ ಜಮೀನುಗಳು ಲಭ್ಯವಿದ್ದು, ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಉದ್ದೇಶಕ್ಕಾಗಿ ಮೆ: ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್, ಬೆಂಗಳೂರು ಇವರಿಗೆ ಗುತ್ತಿಗೆ ಆಧಾರದ ವೇಳೆ ನೀಡಬಹುದೆಂದು ತಿಳಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 68 ಎಲ್‌ಜಿಸಿ 2011 ಬೆಂಗಳೂರು, ದಿನಾಂಕ: 26–5–2012.**

ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕು, ಹರಪನಹಳ್ಳಿ ಗ್ರಾಮದ ಸ.ನಂ.492/ಎಪಿ1 ಮತ್ತು 492/ ಬಿಪಿ1ರಲ್ಲಿ 78.04ಎಕರೆ, ಕಂಭಟ್ರಹಳ್ಳಿ ಗ್ರಾಮದ ಸ.ನಂ.1ರಲ್ಲಿ 17.34 ಎಕರೆ, ಮತ್ತು ಅಡವಿಹಳ್ಳಿ ಗ್ರಾಮದ ಸ.ನಂ.379/ಎಪಿ3ರಲ್ಲಿ 19.70 ಎಕರೆ ಹೀಗೆ ಒಟ್ಟು 115.08 ಎಕರೆ ಜಮೀನನ್ನು U.A.W (ತ.ಕ. ಪಂರಂಭೋಕು) ಜಮೀನುಗಳ ಲಕ್ಷಣಗಳನ್ನು ಹಾಗೆಯೇ ಉಳಿಸಿಕೊಂಡು, ಸದರಿ ಸರ್ಕಾರಿ ಜಮೀನುಗಳಿಗೆ ಯಾವುದೇ ಹಾನಿಯಾಗದಂತೆ ಮತ್ತು ಒತ್ತುವರಿಯಾಗದಂತೆ ಸಂರಕ್ಷಿಸಿಕೊಂಡು ಮೆ:ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್, ಬೆಂಗಳೂರು ಇವರು ಗಾಳಿಯಂತ್ರಗಳಿಂದ 77.4 ಮೆಗಾವ್ಯಾಟ್ ಸಾಮರ್ಥ್ಯದ ವಿದ್ಯುತ್ ಉತ್ಪಾದಿಸುವ ಸಲುವಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969) ನಿಯಮ 19(3)(ಬಿ)ರ ಮೇರೆಗೆ ಜಮೀನಿನ ಪ್ರಚಲಿತ ಮಾರುಕಟ್ಟೆ ದರದ ಶೇಕಡ 10ರಷ್ಟು ಗುತ್ತಿಗೆ ಹಾಗೂ ಪ್ರತಿ ಎರಡು ವರ್ಷಗಳಿಗೆ ಶೇಕಡ 10 ರಷ್ಟು ದರ ಹೆಚ್ಚಿಸುವ ಷರತ್ತಿಗೆ ಒಳಪಟ್ಟು 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ನೀಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ:ಆಇ/1003/ವೆಚ್ಚ–7/2011 ದಿನಾಂಕ: 10–11–2011ರಲ್ಲಿ ನೀಡಿರುವ ಸಹಮತಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜಿ. ಲಕ್ಷ್ಮೀನಾರಾಯಣ**

ಪಿ.ಆರ್. 1587

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3)

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ವಿ. ವೆಂಕಟರಮಣ, ಪತ್ರಾಂಕಿತ, ಉಪಖಜಾನಾಧಿಕಾರಿ, ಖಜಾನೆ ಇಲಾಖೆ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ವಕೀಲರ ಪತ್ರ ಸಂ: ಕಂಪ್ಲೇಂಟ್/ಉಪಲೋಕ್/ಎಂವೈಎಸ್–259/2012/ಪಿಪಿ ದಿನಾಂಕ:04.05.2012. ಮತ್ತು ಉಪ ಲೋಕಾಯುಕ್ತರ–2 (ಪ್ರಭಾರ) ಕರ್ನಾಟಕ ರಾಜ್ಯ ಇವರ ವರದಿ ದಿ:30.04.2012.

**ಪ್ರಸ್ತಾವನೆ:**

ಸರ್ಕಾರಿ ವಕೀಲರು ಇವರು ಮೇಲೆ ಓದಲಾದ ದಿ:04.05.2012ರ ಪತ್ರದೊಂದಿಗೆ ಕಳುಹಿಸಿರುವ ಉಪ ಲೋಕಾಯುಕ್ತರು–2ರವರ ದಿನಾಂಕ: 30.04.2012ರ ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ನಿಯಮ 12(3)ರ ಅಡಿಯಲ್ಲಿ ನೀಡಿರುವ ವರದಿಯಲ್ಲಿ ಶ್ರೀ ವಿ. ವೆಂಕಟರಮಣ, ಪತ್ರಾಂಕಿತ, ಉಪ ಖಜಾನಾಧಿಕಾರಿ, ಖಜಾನೆ ಇಲಾಖೆ, ಅವರು ಉಪ ಖಜಾನೆ, ಪುತ್ತೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ದಿವಂಗತ ಶ್ರೀ ಗುರುರಾಜಪ್ಪ, ಶಿಕ್ಷಕರು ಇವರ ನಿವೃತ್ತಿ ಸೌಲಭ್ಯಗಳ ಚೆಕ್ಕುಗಳನ್ನು ಅವರ ವಾರಸುದಾರರಿಗೆ ನೀಡಲು ಅವರ ಮಗ ಶ್ರೀ ಸಿ.ಜಿ. ಕೇಶವ ಮೂರ್ತಿರವರಿಂದ ರೂ.2500/–ಗಳ ಲಂಚ ಕೇಳಿ ಅದನ್ನು ಪಡೆಯುತ್ತಿದ್ದಾಗಲೇ ದಿ:13.12.2010ರಂದು ಕರ್ನಾಟಕ ಲೋಕಾಯುಕ್ತರ ಪೊಲೀಸ್ ಬಲೆಗೆ ಸಿಕ್ಕಿಬಿದ್ದಿದ್ದು ಈ ಬಗ್ಗೆ ನಡೆದ ಮುಂದಿನ ತನಿಖೆಯಿಂದಾಗಿ ಸಂಗ್ರಹವಾಗಿರುವ ಸಂಗತಿಗಳು, ಮಾಹಿತಿ, ದಾಖಲೆ ಆಧಾರಗಳಿಂದ ಸದರಿ ನೌಕರರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3(1)ರಡಿಯಲ್ಲಿ ಉಕ್ತವಾದ ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ಸ್ಥಿರಪಟ್ಟಿದ್ದು ಸದರಿ ದುರ್ನಡತೆ ಸಂಬಂಧದಲ್ಲಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ14–ಎ ರನ್ವಯ ಪ್ರಕರಣವನ್ನು ಉಪ ಲೋಕಾಯಕ್ತಕ್ಕೆ ವಹಿಸುವಂತೆ ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಪ್ರಕರಣವನ್ನು ಪೂರ್ಣ ಪ್ರಮಾಣದ ವಿಚಾರಣೆಗಾಗಿ ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 07 ಅಖಇ 2011, ಬೆಂಗಳೂರು, ದಿನಾಂಕ:02–06–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ14–ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ವಿ. ವೆಂಕಟರಮಣ, ಪತ್ರಾಂಕಿತ, ಉಪ

ಖಜಾನಾಧಿಕಾರಿ, ಖಜಾನೆ ಇಲಾಖೆ ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರ ಮೂಲಕ ನಡೆಯಬೇಕೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಲ್. ರಮೇಶ**

ಪಿ.ಆರ್. 1588

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

## ಆರ್ಥಿಕ ಸಚಿವಾಲಯ

**ವಿಷಯ:** ನಿವೃತ್ತಿ ವೇತನದಾರರಿಗೆ ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ತುಟ್ಟಿಭತ್ಯೆ ದರಗಳ ಪರಿಷ್ಕರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಇ (ವಿ) 07 ಸಿಪಿಪಿ 2011 ದಿನಾಂಕ:17ನೇ ಅಕ್ಟೋಬರ್ 2011

**2)** ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 17 ಎಸ್‌ಆರ್‌ಪಿ 2012 ದಿನಾಂಕ: 14ನೇ ಮೇ 2012.

**ಆದೇಶ ಸಂಖ್ಯೆ: ಆಇ (ವಿಶೇಷ)100 ಪಿಇಎನ್ 2012 ಬೆಂಗಳೂರು, ದಿನಾಂಕ:17ನೇ ಮೇ 2012.**

ಸರ್ಕಾರವು ದಿನಾಂಕ: 1ನೇ ಜನವರಿ 2012ರಿಂದ ಜಾರಿಗೆ ಬರುವಂತೆ ಮತ್ತು 31ನೇ ಮಾರ್ಚ್ 2012ರವರೆಗೆ ರಾಜ್ಯ ಸರ್ಕಾರದ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ 2007ರ ಪರಿಷ್ಕೃತ ಪಿಂಚಣಿಯಲ್ಲಿ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಶೇ. 69.5ರಿಂದ 76.75ಕ್ಕೆ ಹೆಚ್ಚಿಸಿ ಮಂಜೂರು ಮಾಡಿದೆ. ದಿನಾಂಕ 1ನೇ ಜನವರಿ 2012ಕ್ಕೆ ಲಭ್ಯವಾಗುವ ಶೇ.76.75ರಷ್ಟು ತುಟ್ಟಿಭತ್ಯೆಯನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದೊಂದಿಗೆ 2012ರ ಪರಿಷ್ಕೃತ ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನ ದರದಲ್ಲಿ ದಿನಾಂಕ 1ನೇ ಏಪ್ರಿಲ್ 2012 ರಿಂದ ವಿಲೀನಗೊಳಿಸಿರುತ್ತದೆ.

2. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿಭತ್ಯೆಯನ್ನು ನಗದಾಗಿ ಪಾವತಿ ಮಾಡಲಾಗುವುದು.

3. ಯುಜಿಸಿ/ಎಐಸಿಟಿಇ/ಐಸಿಎಆರ್ ಮತ್ತು ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿದ್ದು ದಿನಾಂಕ 1.1.2006 ರಂದು ಅಥವಾ ತದನಂತರ ನಿವೃತ್ತರಾದ ಪಿಂಚಣಿದಾರರಿಗೆ ಈ ಆದೇಶವು ಅನ್ವಯಿಸತಕ್ಕದ್ದಲ್ಲ.

4. ಈ ಆದೇಶವು ರಾಜ್ಯದ ಸಂಚಿತ ನಿಧಿಯಿಂದ ನಿವೃತ್ತಿ ವೇತನ ಮತ್ತು ಕುಟುಂಬ ನಿವೃತ್ತಿ ವೇತನ ಪಡೆಯುತ್ತಿರುವ ಅನುದಾನಿತ ಶಿಕ್ಷಣ ಸಂಸ್ಥೆಗಳ ನಿವೃತ್ತಿ ವೇತನದಾರರಿಗೆ/ಕುಟುಂಬ ನಿವೃತ್ತಿ ವೇತನದಾರರಿಗೆ ಅನ್ವಯಿಸುತ್ತದೆ.

5. ಈ ಆದೇಶದಿಂದಾಗಿ ಪಾವತಿಸಬೇಕಾದ ತುಟ್ಟಿಭತ್ಯೆಯ ಮೊತ್ತದಲ್ಲಿ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಶಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಶಗಳನ್ನು ಕಡೆಗಣಿಸತಕ್ಕದ್ದು.

6. ತುಟ್ಟಿಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 1589

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಿಶ್ರಾಂತಿ ವೇತನ)

## ಆರ್ಥಿಕ ಸಚಿವಾಲಯ

**ವಿಷಯ:** **ಯುಜಿಸಿ/ಐಸಿಎಆರ್/ಎಐಸಿಟಿಇ** ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ಬೋಧಕ ವರ್ಗದವರಿಗೆ ಮತ್ತು **ಎಫ್‌ಎನ್‌ಜೆಪಿಸಿ** ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ತುಟ್ಟಿಭತ್ಯೆಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ:**
1) ಸ.ಆ.ಸಂಖ್ಯೆ:ಇಡಿ 37 ಯುಎನ್‌ಇ 2009 ದಿನಾಂಕ 24-12-2009
**2)** ಸ.ಆ.ಸಂಖ್ಯೆ: ಎಹೆಚ್‌ಡಿ 64 ಎಯುಎಂ 2009 ದಿನಾಂಕ 24-03-2010
**3)** ಸ.ಆ.ಸಂಖ್ಯೆ: ಲಾ 147 ಎಲ್‌ಎಸಿ 2009 ದಿನಾಂಕ 24-06-2010
**4)** ಸ.ಆ.ಸಂಖ್ಯೆ: ಎಫ್‌ಡಿ 15 ಎಸ್‌ಆರ್‌ಪಿ 2010 ದಿನಾಂಕ 23-04-2010
**5)** ಸ.ಆ.ಸಂಖ್ಯೆ: ಎಫ್‌ಡಿ 17 ಎಸ್‌ಆರ್‌ಪಿ 2010 ದಿನಾಂಕ 23-04-2010
**6)** ಸ.ಆ.ಸಂಖ್ಯೆ: ಎಫ್‌ಡಿ 27 ಎಸ್‌ಆರ್‌ಪಿ 2010 ದಿನಾಂಕ 14-10-2010
**7)** ಸ.ಆ.ಸಂಖ್ಯೆ: ಇಡಿ 96 ಡಿಟಿಇ 2010 ದಿನಾಂಕ 07-03-2011
**8)** ಸ.ಆ.ಸಂಖ್ಯೆ: ಎಫ್‌ಡಿ 22 ಎಸ್‌ಆರ್‌ಪಿ 2011 ದಿನಾಂಕ 19-04-2011
**9)** ಸ.ಆ.ಸಂಖ್ಯೆ: ಎಫ್‌ಡಿ 37 ಎಸ್‌ಆರ್‌ಪಿ 2011 ದಿನಾಂಕ 20-10-2011

**ಸರ್ಕಾರಿ ಆದೇಶ ಸಂಖ್ಯೆ:ಆಇ 19 ಎಸ್‌ಆರ್‌ಪಿ 2012 ಬೆಂಗಳೂರು, ದಿನಾಂಕ:17ನೇ ಮೇ 2012**

ಸರ್ಕಾರವು ದಿನಾಂಕ **1ನೇ ಜನವರಿ 2012** ರಿಂದ ಜಾರಿಗೆ ಬರುವಂತೆ 2006ರ ಪರಿಷ್ಕೃತ ಯುಜಿಸಿ/ಐಸಿಎಆರ್/ಎಐಸಿಟಿಇ ವೇತನ ಶ್ರೇಣಿಗಳಲ್ಲಿರುವ ಬೋಧಕ ಸಿಬ್ಬಂದಿಗಳಿಗೆ ಮತ್ತು ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ **ಶೇ. 58** ರಿಂದ **ಶೇ. 65ಕ್ಕೆ** ಹೆಚ್ಚಿಸಿ ಮಂಜೂರು ಮಾಡಿದೆ.

2. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿಭತ್ಯೆಯನ್ನು ಮುಂದಿನ ಆದೇಶ ಹೊರಡಿಸುವವರೆಗೆ ನಗದಾಗಿ ಪಾವತಿ ಮಾಡಲಾಗುವುದು.

3. ಈ ಆದೇಶದ ಉದ್ದೇಶಗಳಿಗಾಗಿ ಮೂಲ ವೇತನ ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ 2006ರ ಪರಿಷ್ಕೃತ ಯುಜಿಸಿ/ಐಸಿಎಆರ್/ಎಐಸಿಟಿಇ ಮತ್ತು ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿ ಪಡೆಯುವ ವೇತನ.

4. ಮೂಲ ವೇತನಕ್ಕೆ ಇನ್ಯಾವುದೇ ಉಪಲಬ್ದಗಳನ್ನು ಸೇರಿಸತಕ್ಕದ್ದಲ್ಲ.

5. ತುಟ್ಟಿ ಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

6. ತುಟ್ಟಿಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ್ ರಾಜ ಗುಪ್ತ**

ಸರ್ಕಾರದ ಉಪ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–2)

ಪಿ.ಆರ್. 1590

## INFRASTRUCTURE SECRETARIAT

### NOTIFICATION

**NO: IDD/59/ITS/2009 BANGALORE DATED: 19-05-2012**

Ref: G.O.No.IDD/59/ITS/2009 Dated 01.06.2010

Government is hereby modifies the certain clauses of the "Guidelines for procurement of PPP projects through Swiss challenge Route" issued vide GO No. IDD/59/ITS/2009 dated 01.06.2010, which is annexed to this Notification as Annexure.

By Order and in the name of the Governor of Karnataka,

**R. Shivalingaiah**

Under Secretary to Govt.,

infrastructure Development Department

### Annexure

Modification to the clauses of the "Guidelines for procurement of PPP Projects through Swiss Challenge Route" issued vide G.O.No.IDD/59/ITS/2009 dated 01.06.2010

| S.L.No. of Para | Exiting Para | Para to be added/modified |
|---|---|---|
| 1 | 2 | 3 |
| Foot note # 2 para 4.3 viii page 8 | The requirement of land, if any, for the project would be considered for acquisition / allotment at the Market rates / KIADB allotment rates wherever required. | The requirement of land, if any, for the project would be considered for acquisition / allotment at the Market rates / KIADB allotment rates wherever required, which will be borne by the developer. In the event, if any Govt. Land is available, the same will be provided on lease terms with Market rates as the lease rent to developer. No land would be acquired and Provided to developer for commercial development.<br>Land requirements indicated by the developer for the project will be vetted by the Land Audit Committee and the same will be placed before SHLCC for approval. |
| Para 4.7 (ii) | The Proposal Initiator's role in the proposed concessionaire company and its ability to construct and / or operate the project shall be as per the qualification norms in the Model RFQ published by GOI and prescribed by Gok. | The Proposal Intiator's role in the proposed concessionaire company and its ability to construct and /or operate the project shall be as per the qualification norms in the Model RFQ Published by GOI and prescribed by Gok and the same can be moderated, if required by the competent authority under the guidance of SLSWA. |
| Para 4.7 (vi) to be added | - | 4.7 (vi) Proposal Initiator shall indicate in the detailed proposal, the bidding route to be followed exercising one of the following two |

| | | |
|---|---|---|
| | | options at the time of submission of the Proposal.<br>a) Option one, if the competitive bidding process results in a superior proposal, the proposal initiator would be given an opportunity to match the competing counter proposal only if the proposal initiator's bid value is within 15% of the superior bid value and be selected as the project concessionaire; provided that the composition of the bid value would be communicated through the bid documents.<br>**OR**<br>b) As a second option, if the competitive bidding process results in a superior proposal, then second and final round of financial bidding will be conducted between the original proponent and the best bidder with the minimum floor level set at best bid achieved in first option.<br>The option once exercised at the time of submission of final proposal cannot be changed. |
| Para 4.13 | If the competitive bidding process results in a superior proposal, the Proposal Initiator would be given an opportunity to match the competing counter proposal only if the Proposal Initiator's bid value is with in 15% of the superior bid value and be selected as the project concessionaire; provided that the composition of the bid value would be communicated through the bid documents. | If the original proponent chooses option 4.7 (vi) (a) and if the competitive bidding process results in a superior proposal, the proposal initiator's would be given an opportunity to Match the competing counter proposal only if the proposal Initiators. bid value is within 15% of the superior bid value and be selected as the project concessionaire; provided that the composition of the bid value would be communicated through the bid documents. |
| Para 4.14 | If the Proposal Initiator declines to match the superior counter proposal, then the applicant that has made the superior proposal would be selected as the concessionaire. | If the Original Proponent chooses option 4.7 (vi) (b) and if the competitive bidding process results in a superior proposal, then second and final round of financial bidding will be conducted between the original proponent and the best bidder with the minimum floor level set at best bid achieved in first option. |
| Para 4.15 | Upon such selection as in step 4.14 above of successful bidder other than the Proposal Initiator, Gok/ Gok Agency concerned shall cause/arrange to reimburse to the Proposal Initiator, the cost of DPR as determined above and recover the same from the successful bidder. In order to encourage competition in the bidding process, the superior bidder, in the event, the project is no offered to him, would be reimbursed /compensated to an extent an amount not exceeding 0.1% of the cost of the project or Rs. 20 lakhs whichever is lesser''.<br>……………<br>Footnote # 8: This would be available if the superior bid is better than the offer of the proposal initiator and that the project is not available to the superior bidder consequent upon the project proponent agreeing to | Upon such selection as in step 4.13 or 4.14 above of successful bidder other than the Proposal Initiator,Gok/ Gok Agency concerned shall cause/arrange to reimburse to the Proposal Initiator, the cost of DPR as dertermined above and recover the same from the successful bidder. In order to encourage competition in the bidding process, the superior bidder, in the event, the project is no offered to him8, would be reimbursed / compensated to an extent an amount not exceeding 0.1% of the cost of the project or Rs.20 lakhs whichever is lesser".<br>………………<br>Footnote # 8: This would be available if the |

| | | |
|---|---|---|
| | match the superior bid. | superior bid is better than the offer of the proposal initiator and that the project is not available to the superior bidder consequent upon the project proponent agreeing to match the superior bid |
| Foot note # 10 Annexure V page 34 | The competent committee/ agency would determine the 'Bid Value Criteria for selection | The Competent authority/ committee/ agency would determine the single bid parameter to be adopted as bid criteria. |

P.R. 1553

**R. Shivalingaiah**
Under Secretary to Govt.,
infrastructure Development Department

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** 2012–13ನೇ ಸಾಲಿನಲ್ಲಿ ಸರ್ಕಾರಿ ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001, ದಿನಾಂಕ 22.11.2001.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸೇನೌವ 2011, ದಿನಾಂಕ 27.4.2011.
3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸೇನೌವ 2011, ದಿನಾಂಕ 31.5.2011
4) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸೇನೌವ 2012, ದಿನಾಂಕ 28.4.2012.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 22.11.2001 ರ ಸರ್ಕಾರದ ಆದೇಶದಲ್ಲಿ ಸರ್ಕಾರಿ ನೌಕರರ ವರ್ಗಾವಣೆ ಕುರಿತಂತೆ ವಿಸ್ತೃತ ಮಾರ್ಗಸೂಚಿಗಳನ್ನು ನೀಡಲಾಗಿದೆ. ಈ ಮಾರ್ಗಸೂಚಿಗಳ ಪ್ರಕಾರ ಸರ್ಕಾರಿ ನೌಕರರ ವರ್ಗಾವಣೆಗಳನ್ನು ಪ್ರತಿ ವರ್ಷ ಏಪ್ರಿಲ್ ಮತ್ತು ಮೇ ತಿಂಗಳಲ್ಲಿ ಮಾತ್ರ ಕೆಲವು ಷರತ್ತುಗಳಿಗೊಳಪಟ್ಟು ಮಾಡಬಹುದಾಗಿದೆ.

ಪ್ರಸ್ತುತ 2012–13ನೇ ಸಾಲಿನಲ್ಲಿ ಸರ್ಕಾರಿ ನೌಕರರ ವರ್ಗಾವಣೆಗಳ ಬಗ್ಗೆ ಮೇಲೆ ಓದಲಾದ ದಿನಾಂಕ 28.4.2012ರ ಆದೇಶದಲ್ಲಿ ದಿನಾಂಕ 28.4.2012ರಿಂದ ದಿನಾಂಕ 25.5.2012ರ ಅವಧಿಯಲ್ಲಿ ವರ್ಗಾವಣೆಗಳನ್ನು ಮಾಡಬಹುದೆಂದು ಆದೇಶಿಸಲಾಗಿರುತ್ತದೆ. ವರ್ಗಾವಣೆ ಅವಧಿಯನ್ನು ಮತ್ತೆ ವಿಸ್ತರಿಸುವುದು ಅವಶ್ಯವೆಂದು ಸರ್ಕಾರವು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸೇನೌವ 2012, ಬೆಂಗಳೂರು, ದಿನಾಂಕ: 29.05.2012.**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಮೇಲೆ ಕ್ರಮಾಂಕ 4 ರಲ್ಲಿ ಓದಲಾದ ದಿನಾಂಕ 28.4.2012ರ ಸರ್ಕಾರಿ ಆದೇಶದಲ್ಲಿ ನಮೂದಿಸಿದ ಷರತ್ತುಗಳೊಂದಿಗೆ ಸರ್ಕಾರಿ ನೌಕರರ ವರ್ಗಾವಣೆಗಳನ್ನು ***ದಿನಾಂಕ:15.6.2012*** ರವರೆಗೆ ಮಾಡಬಹುದೆಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವರಾಜು**
ಸರ್ಕಾರದ ಉಪ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವಾ ನಿಯಮಗಳು)

ಪಿ.ಆರ್. 1554

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಸರ್ಕಾರಿ ವಕೀಲರ ಸಂಘದ ಸಮ್ಮೇಳನ/ ಕಾರ್ಯಾಗಾರ ಸಭೆಗೆ ಸಹಾಯಾನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಲಾ 54 ಎಲ್‌ಎಎಂ 2012, ದಿನಾಂಕ 17.04.2012.
2) ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ವಕೀಲರ ಸಂಘದವರ ಮನವಿ ಪತ್ರದ ದಿನಾಂಕ 04.05.2012.

**ಪ್ರಸ್ತಾವನೆ:**

ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ವಕೀಲರುಗಳ ಸಂಘ ಇವರು ತಮ್ಮ ಮನವಿಯಲ್ಲಿ ಮಾನ್ಯ ನಗರಾಭಿವೃದ್ಧಿ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು ಹಾಗೂ ಅಡ್ವೋಕೇಟ್ ಜನರಲ್ ರವರ ಅಧ್ಯಕ್ಷತೆಯಲ್ಲಿ ದಿನಾಂಕ: 03.06.2012 ರಂದು ಸರ್ಕಾರಿ ವಕೀಲರ ಕಾರ್ಯಾಗಾರ ಸಭೆಯನ್ನು ಆಯೋಜಿಸಲಾಗಿದೆ ಎಂದು ತಿಳಿಸುತ್ತಾ ಸದರಿ ಸಭೆಯಲ್ಲಿ ಸುಮಾರು 170 ಸರ್ಕಾರಿ ವಕೀಲರು ಹಾಗೂ ಅಧಿಕಾರಿ/ಸಿಬ್ಬಂದಿ ವರ್ಗದವರು ಭಾಗವಹಿಸುವುದರಿಂದ ಸದರಿ ಸಮ್ಮೇಳನದ ಅಂದಾಜಿನ ಖರ್ಚು ವೆಚ್ಚಗಳು ಸುಮಾರು ರೂ. 4,00,000/– ಲಕ್ಷವಾಗುವುದರಿಂದ ಸದರಿ ಮೊತ್ತವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ, ಲಾ 138 ಎಲ್‌ಸಿಎಲ್ 2012 ಬೆಂಗಳೂರು, ದಿನಾಂಕ 29–05–2012.**

ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ ಲೆಕ್ಕ ಶೀರ್ಷಿಕೆ 2014–00–114–0–03–104 (ವಕೀಲರ ಕಲ್ಯಾಣನಿಧಿ) ಯೋಜನೆಯಡಿ ಒದಗಿಸಿರುವ ರೂ.50.00 ಲಕ್ಷ ಆಯವ್ಯಯದಲ್ಲಿಯೇ ರೂ. 3.00 ಲಕ್ಷಗಳನ್ನು (ಮೂರು ಲಕ್ಷಗಳು ಮಾತ್ರ) ಭರಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ರಾಜ್ಯ ಸರ್ಕಾರಿ ವಕೀಲರ ಸಂಘಕ್ಕೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಹಣವನ್ನು ವಕೀಲರ ಸಂಘಗಳಿಗೆ ಸಹಾಯಾನುದಾನ ನಿಯಮಾವಳಿಯಲ್ಲಿ ಸ್ಪಷ್ಟಪಡಿಸಿರುವಂತೆ, ಆದೇಶದಲ್ಲಿ ಬಿಡುಗಡೆ ಮಾಡಿರುವ ಮೊತ್ತವನ್ನು ಅಡ್ವೊಕೇಟ್ ಜನರಲ್ ಕಛೇರಿ ರವರ ರಶೀದಿ ತಯಾರಿಸಿ, ರಾಜ್ಯ ಹುಜೂರ್ ಖಜಾನೆಯಿಂದ ಚೆಕ್‌ನ್ನು ಡ್ರಾ ಮಾಡಿಕೊಂಡು, ಕರ್ನಾಟಕ ರಾಜ್ಯ ಸರ್ಕಾರಿ ವಕೀಲರ ಸಂಘಕ್ಕೆ ಪಾವತಿಸುವುದು.

1. ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ನಿಯಮಾನುಸಾರ ಬಳಸತಕ್ಕದ್ದು.
2. ಬಳಕೆ ಪ್ರಮಾಣ ಪತ್ರವನ್ನು ಸರ್ಕಾರಿ ವಕೀಲರ ಸಂಘವು ಅಡ್ವೊಕೇಟ್ ಜನರಲ್‌ರವರಿಗೆ ಅಂಕಿ ಅಂಶಗಳ ಸಹಿತ ಕಾಲಮಿತಿಯೊಳಗೆ ನಿಯಮಾನುಸಾರ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆ, ಇ 184 ವೆಚ್ಚ 10/2012 ದಿನಾಂಕ 22–05–2012 ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುಕ್ಮಿಣಿ ದಿವಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ–2)
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ,

ಪಿ.ಆರ್. 1555

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಹೆಚ್.ಟಿ ಜಯರಾಮಯ್ಯ, ಪಿ.ಐ., ಡಿ.ಸಿ.ಆರ್.ಬಿ., ಚಾಮರಾಜನಗರ, ಚಾಮರಾಜನಗರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 20/ಡಿಇ–1 ಆರ್.6/2008 ದಿನಾಂಕ: 3–10–09
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ ಮತ್ತು ಐ.ಜಿ.ಪಿ, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ (8) 137/2009–10 ದಿನಾಂಕ:04–7–2010
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 01.10.2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8) 137/2009–10 ದಿನಾಂಕ:22–12–2010
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 217 ಸಿಎನ್‌ಎಸ್ 2011 ದಿನಾಂಕ: 15–5–2012.

**ಪ್ರಸ್ತಾವನೆ:**

ಶ್ರೀ ಹೆಚ್.ಟಿ. ಜಯರಾಮಯ್ಯ, ಪಿ.ಐ., ಇವರು ಬೆಂಗಳೂರಿನ ನಂದಿನಿ ಬಡಾವಣೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಎಚ್.ಟಿ. ಜಯರಾಮಯ್ಯ, ಪಿ.ಐ., (ನಂದಿನಿ ಬಡಾವಣೆ ಪೊಲೀಸ್ ಠಾಣೆ) ಹಾಲಿ ಗಣ್ಯ ಮತ್ತು ಅತಿಗಣ್ಯ ವ್ಯಕ್ತಿಗಳ ಭದ್ರತಾ ವಿಭಾಗ, ಬೆಂಗಳೂರು ನಗರ ಆದ ನೀವು ನಂದಿನಿ ಬಡಾವಣೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸಹಾಯಕ ಪೊಲೀಸ್ ಕಮೀಷನರ್, ಮಲ್ಲೇಶ್ವರಂ ಉಪ ವಿಭಾಗದವರ ಜ್ಞಾಪನ, ದಿನಾಂಕ:14–4–2008 ರೀತ್ಯಾ ಪೊಲೀಸ್ ಠಾಣಾ ವ್ಯಾಪ್ತಿಯ ರೌಡಿಗಳ ಬಗ್ಗೆ ನಿರ್ದಿಷ್ಟ ಮಾಹಿತಿಯನ್ನು ಸಂಗ್ರಹಿಸಿ ಚುನಾವಣೆಗೆ ಯಾವುದೇ ರೀತಿಯ ಅಡ್ಡಿ ಆತಂಕವಾಗದಂತೆ ಕ್ರಮ ತೆಗೆದುಕೊಂಡು ಪಾಲನಾ ವರದಿಯನ್ನು ಸಲ್ಲಿಸಲು ಸೂಚಿಸಿದರೂ ಸಹ ಪಾಲನಾ ವರದಿಯನ್ನು ಸಲ್ಲಿಸಿರುವುದಿಲ್ಲ. ಅಲ್ಲದೆ ಸದರಿ ರೌಡಿ ಆಸಾಮಿಗಳ ಚಟುವಟಿಕೆಗಳ ಬಗ್ಗೆ ಹತೋಟಿಯಲ್ಲಿಡುವ ಬಗ್ಗೆ ಯಾವುದೇ ಕಾನೂನು ರೀತ್ಯಾ ಕ್ರಮ ತೆಗೆದುಕೊಳ್ಳದಿರುವುದು ಹಾಗೂ ದಿನಾಂಕ: 19–4–2008 ರಂದು ಶ್ರೀ ಎನ್. ವಸಂತ್ ಕುಮಾರ್ ಎಂಬುವವರಿಗೆ ಶಸ್ತ್ರ ಲೈಸನ್ಸ್ ಮಂಜೂರು ಮಾಡುವ ಬಗ್ಗೆ ಮೇಲಾಧಿಕಾರಿಗಳಿಗೆ ಶಿಫಾರಸ್ಸು ಮಾಡಿರುತ್ತೀರಿ. ಆದರೆ ಸದರಿ ಅರ್ಜಿದಾರರ ತಂದೆ ಶ್ರೀ ಟಿ. ನಾಗರಾಜ್ ಎಂಬುವವರು ವಿದ್ಯಾರಣ್ಯಪುರ ಪೊಲೀಸ್ ಠಾಣೆ ಮೊ.ಸಂ. 77/07 ಕಲಂ 302 ರೆ/ವಿ 34 ಐ.ಪಿ.ಸಿ. ಪ್ರಕರಣದಲ್ಲಿ ಭಾಗಿಯಾಗಿದ್ದು, ಸುಮಾರು ಒಂದು ವರ್ಷದಿಂದ ತಲೆ ಮರೆಸಿಕೊಂಡಿರುವ ಆರೋಪಿಯಾಗಿರುತ್ತಾರೆ. ಈ ಬಗ್ಗೆ ನಿಮಗೆ ಸಂಪೂರ್ಣ ಮಾಹಿತಿ ಇದ್ದರೂ ಸಹ ಜವಾಬ್ದಾರಿಯುತವಾದ ಪೊಲೀಸ್ ಅಧಿಕಾರಿಯಾದ ನೀವು ಶಸ್ತ್ರ ಪರವಾನಗಿ ಅರ್ಜಿಯಲ್ಲಿ ಅರ್ಜಿದಾರರು ಅವರ ಕುಟುಂಬ ಸದಸ್ಯರಾದ ಟಿ. ನಾಗರಾಜು, ತಾಯಿ ಮಾಯಮ್ಮ ಹಾಗೂ ತಮ್ಮ ಗಿರೀಶ್‌ರವರೊಂದಿಗೆ ವಾಸವಾಗಿರುತ್ತಾರೆ.

ಅರ್ಜಿದಾರರ ಕುಟುಂಬದ ಸದಸ್ಯರು ಯಾವುದಾದರೂ ಕ್ರಿಮಿನಲ್ ಪ್ರಕರಣದಲ್ಲಿ ಭಾಗಿಯಾಗಿರುವರೆ ಎಂಬ ಬಗ್ಗೆ ತನಿಖಾ ಕಾಲದಲ್ಲಿ ತಿಳಿದು ಬಂದಿರುವುದಿಲ್ಲಾ ಎಂದು ವರದಿ ಸಲ್ಲಿಸಿ, ಸದರಿ ಕೊಲೆ ಆರೋಪದ ಬಗ್ಗೆ ಪೂರ್ಣ ಮಾಹಿತಿ ಇದ್ದು, ಕೊಲೆ ಆರೋಪಿ ಮಗನಿಗೆ ಕಾನೂನು ಬಾಹಿರವಾಗಿ ಚುನಾವಣಾ ಸಮಯದಲ್ಲಿ ರಿವಾಲ್ವಾರ್/ಪಿಸ್ತೂಲ್ ಶಸ್ತ್ರ ಪರವಾನಗಿಯನ್ನು ಮಂಜೂರು ಮಾಡಲು ಮೇಲಾಧಿಕಾರಿಗೆ ಶಿಫಾರಸ್ಸು ಮಾಡಿ ಕರ್ತವ್ಯದಲ್ಲಿ ಅತೀವ ಕರ್ತವ್ಯ ನಿರ್ಲಕ್ಷತೆ ಬೇಜವಾಬ್ದಾರಿತನ ಹಾಗೂ ದುರ್ನಡತೆ ಪ್ರದರ್ಶಿಸಿರುವುದು ಕಂಡು ಬರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 03-10-2009ರ ಆದೇಶದಲ್ಲಿ ಅರ್ಜಿದಾರರು ಪ್ರಸ್ತುತ ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿ ಮೂರು ಹಂತಗಳನ್ನು ಕೆಳಗಿಳಿಸಲಾಗಿದೆ. ಕೆಳಗಿಳಿಸಿದ ಹಂತದಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿಯನ್ನು ಗಳಿಸುವುದು ದಿನಾಂಕ: 10-06-2008 ರಿಂದ 10-09-2008 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 04-07-2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪವು ಸಾಬೀತಾಗಿದ್ದು, ಆದರೆ ಶಿಸ್ತು ಪ್ರಾಧಿಕಾರದ ದಂಡನಾದೇಶವು ಕರ್ನಾಟಕ ನಾಗರಿಕ ಸೇವಾ ನಿಯಮಗಳು 59(1)(ಬಿ)ಗೆ ವ್ಯತಿರಿಕ್ತವಾಗಿದೆ. ಈ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವು ತಾಂತ್ರಿಕ ದೋಷದಿಂದ ಕೂಡಿರುವುದನ್ನು ಗಮನಿಸಿ ಈ ಅಂಶ ಸೀಮಿತಗೊಳಿಸಿ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 155 ಪೊಸಿಅ 2010 ಬೆಂಗಳೂರು, ದಿನಾಂಕ: 25-5-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಟಿ. ಜಯರಾಮಯ್ಯ, ಪಿ.ಐ., ಡಿ.ಸಿ.ಆರ್.ಬಿ., ಚಾಮರಾಜನಗರ, ಚಾಮರಾಜನಗರ ಜಿಲ್ಲೆ, ಇವರಿಗೆ ಶಿಸ್ತು ಪ್ರಾಧಿಕಾರದ ದಿನಾಂಕ:03-10-2009ರ ದಂಡನಾದೇಶವನ್ನು ಮಾರ್ಪಡಿಸಿ, ಈ ಕೆಳಕಂಡಂತೆ ಆದೇಶಿಸಿದೆ;

i) ಇವರ ವೇತನವನ್ನು ಇವರು ಪ್ರಸ್ತುತ ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿನ ಮೂರು ಹಂತಗಳನ್ನು ನಾಲ್ಕು ವರ್ಷಗಳ ಅವಧಿಗೆ ಕೆಳಗಿಳಿಸಲಾಗಿದೆ.

ii) ನಾಲ್ಕು ವರ್ಷಗಳ ದಂಡನೆಯ ಅವಧಿ ಮುಗಿದ ನಂತರ ಇವರು ಕೆಳಗಿಳಿಸಿದ ಹಂತದಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಗಳಿಸತಕ್ಕದ್ದು.

iii) ದಿನಾಂಕ: 10-06-2008 ರಿಂದ 10-09-2008ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ.ನಿಂಗಪ್ಪ**

ಪಿ.ಆರ್. 1556

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಬಿ)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗಕ್ಕೆ 2012-13ನೇ ಸಾಲಿನ ಮೊದಲನೆ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಮಪ್ರಮಂ/ನಗದು:ಹ.ಬಿ/2012-13, ದಿನಾಂಕ: 26-04-2012.

**ಪ್ರಸ್ತಾವನೆ :**

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ 2012-13ನೇ ಸಾಲಿನಲ್ಲಿ ರೂ. 3400.00 ಲಕ್ಷಗಳನ್ನು ಈ ಕೆಳಕಂಡಂತೆ ಒದಗಿಸಲಾಗಿದೆ.

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1. | 2515-00-103-0-02-101 (ಸಹಾಯಾನುದಾನ) | 100.00 |
| 2. | 4515-00-800-0-03-132 (ಬಂಡವಾಳ ವೆಚ್ಚ) | 2199.99 |
| 3. | 4515-00-800-0-03-422 (ಎಸ್.ಸಿ.ಪಿ.) | 850.01 |
| 4. | 4515-00-800-0-03-423 (ಟಿ.ಎಸ್.ಪಿ.) | 250.00 |
| | **ಒಟ್ಟು** | **3400.00** |

ಮೇಲೆ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇವರು 2012–13ನೇ ಸಾಲಿನ ಪ್ರಥಮ ಕಂತಿನ ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಸದರಿಯವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗಕ್ಕೆ ಪ್ರಥಮ ಕಂತಿನ ಅನುದಾನವೆಂದು 850.00 ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಿದೆ. ಅಂತೆಯೇ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 06 ಮಪ್ರಮಂ 2012 ಬೆಂಗಳೂರು, ದಿನಾಂಕ: 24–05–2012**

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗಕ್ಕೆ 2012–13ನೇ ಸಾಲಿನ ಪ್ರಥಮ ಕಂತಿನ ಅನುದಾನ ರೂ. 850.00 ಲಕ್ಷ (ಎಂಟು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಡಿ ಬಿಡುಗಡೆ ಮಾಡಿದೆ.

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1. | 2515–00–103–0–02–101 (ಸಹಾಯಾನುದಾನ) | 25.00 |
| 2. | 4515–00–800–0–03–132 (ಬಂಡವಾಳ ವೆಚ್ಚ) | 550.00 |
| 3. | 4515–00–800–0–03–422 (ಎಸ್.ಸಿ.ಪಿ) | 212.50 |
| 4. | 4515–00–800–0–03–423 (ಟಿ.ಎಸ್.ಪಿ) | 62.50 |
| | **ಒಟ್ಟು** | **850.00** |

2. ಬಿಡುಗಡೆಯಾದ ಈ ಮೊತ್ತವನ್ನು ಮಂಡಳಿಯ ಕಾರ್ಯದರ್ಶಿಯವರ ವೈಯಕ್ತಿಕ ಖಾತೆಗೆ ಜಮೆ ಮಾಡಿ, ನಂತರ ಅವಶ್ಯಕತೆಗನುಗುಣವಾಗಿ ಖರ್ಚು ಮಾಡತಕ್ಕದ್ದು ಮತ್ತು ನಿಯಮಾನುಸಾರ ಹಣ ಬಳಕೆ ಪ್ರಮಾಣಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.

3. ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಆಇ 04 ಟಿಎಫ್‌ಪಿ 2012, ದಿನಾಂಕ 27–04–2012 ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಉಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ.

ಪಿಆರ್ ನಂ. 1566

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಇಫ್ತಿಕರ್ ಅಹ್ಮದ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೆಂಬೋಡಿ, ಕೋಲಾರ ತಾಲ್ಲೂಕು ಮತ್ತು ಜಿಲ್ಲೆ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಆಕುಕ ಸೇವೆಗಳು ಬೆಂಗಳೂರು ಇವರ ದೋಷಾರೋಪಣಾ ಪಟ್ಟಿ ಸಂಖ್ಯೆ: ಡಿಪಿಜಿ/ಬೆಂವಿ(2)/ಕೋ/05/07–08, ದಿನಾಂಕ: 05–12–2008.
2. ಡಾ: ಇಫ್ತಿಕರ್ ಅಹ್ಮದ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಇವರ ರಕ್ಷಣಾ ಹೇಳಿಕೆ ದಿನಾಂಕ: 16–01–2009.
3. ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಪಿಜಿ/ಬೆಂವಿ(2)ಕೋ/05/07–08, ದಿನಾಂಕ: 08–05–2009.
4. ಪತ್ರಿಕಾ ಪ್ರಕಟಣೆ ಸಂಖ್ಯೆ: ಡಿಪಿಜಿ/ಬೆಂವಿ/(2)/ಕೋ/05/07–08, ದಿನಾಂಕ: 8–10–2009 ಮತ್ತು 10–10–2009.
5. ವಿಚಾರಣಾ ಪ್ರಾಧಿಕಾರಿ ಹಾಗೂ ಮುಖ್ಯ ಜಾಗೃತಾಧಿಕಾರಿ (ಜಾಗೃತಕೋಶ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ವಿಚಾರಣಾ ವರದಿ ಸಂಖ್ಯೆ: ಮುಜಾಅ/ಜಾಕೋ/02/2009–10. ದಿನಾಂಕ: 17–12–2009.
6. ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಜಿ/ಬೆಂವಿII/ಕೋ/05/07–08 ದಿನಾಂಕ: 18–01–2010.
7. ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಜಿಪಿ/ಬೆಂವಿಖಖ/ಕೋ/07–08, ದಿನಾಂಕ: 10–04–2012.

**ಪ್ರಸ್ತಾವನೆ :**

ಡಾ: ಇಫ್ತಿಕರ್ ಅಹ್ಮದ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೆಂಬೋಡಿ, ಕೋಲಾರ ತಾಲ್ಲೂಕು ಮತ್ತು ಜಿಲ್ಲೆ ಇವರು ದಿನಾಂಕ: 01–03–2004 ರಿಂದ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರುಹಾಜರಾಗಿರುವ ಆರೋಪಕ್ಕೆ ಸಂಬಂಧಿಸಿದಂತೆ ಆಯುಕ್ತರು ಆಕುಕ ಸೇವೆಗಳು ಬೆಂಗಳೂರು ರವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿ ಮಾಡಿದ್ದರು.

ಡಾ: ಇಫ್ತಿಕರ್ ಅಹ್ಮದ್ ರವರು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಅವರು ನೀಡಿದ ಷೋಕಾಸ್ ನೋಟೀಸಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 16–01–2009ರ ಪತ್ರದಲ್ಲಿ ಹೇಳಿಕೆಯನ್ನು ಸಲ್ಲಿಸಿದ್ದು, ವೈಯಕ್ತಿಕ ಕಾರಣದಿಂದ ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ತಿಳಿಸಿರುತ್ತಾರೆ. ನಂತರ ಪ್ರಕರಣದ ಸತ್ಯಾ–ಸತ್ಯತೆಯನ್ನು ಕಂಡುಕೊಳ್ಳಲು ಆಯುಕ್ತರು, ಆಕುಕ ಸೇವೆಗಳು,

ಬೆಂಗಳೂರು ಇವರು ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಲು ನಿರ್ಧರಿಸಿ ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು, ಜಾಗೃತಕೋಶ ಇವರನ್ನು ವಿಚಾರಣಾಧಿಕಾರಿಗಳಿಗಾಗಿ ನೇಮಿಸಿದ್ದು, ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶಿಸಿದ್ದರು. ತದನಂತರ ಆಪಾದಿತರನ್ನು ವಿಚಾರಣೆಗೆ ಹಾಜರಾಗಲು ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣೆಯನ್ನು ದಿನಾಂಕ: 02–10–2009 ರಂದು ಬೆಳಿಗ್ಗೆ 10 ಗಂಟೆಗೆ ಮುಖ್ಯ ಜಾಗೃತಾಧಿಕಾರಿಗಳು, ಜಾಗೃತ ಕೋಶ, ಆಕುಕ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರಲ್ಲಿ ನಡೆಯುವುದರಿಂದ ವಿಚಾರಣಾ ದಿನಾಂಕದಂದು ತಪ್ಪದೆ ಹಾಜರಾಗುವಂತೆ ತಿಳಿಸುತ್ತಾ ವಿಚಾರಣೆಗೆ ಹಾಜರಾಗದಿದ್ದಲ್ಲಿ ಏಕಪಕ್ಷೀಯವಾಗಿ ನಿರ್ಣಯ ತೆಗೆದುಕೊಳ್ಳಲಾಗುವುದೆಂದು ತಿಳಿಸಿ ಪತ್ರಿಕಾ ಪ್ರಕಟಣೆ ನೀಡಲಾಗಿತ್ತು.

ಮುಖ್ಯ ಜಾಗೃತಾಧಿಕಾರಿಗಳು (ಜಾಗೃತಕೋಶ) ಆಕುಕ ಸೇವೆಗಳು, ಬೆಂಗಳೂರು ಇವರು ಪ್ರಕರಣಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಸಲ್ಲಿಸಿ, ಸದರಿ ವಿಚಾರಣಾ ವರದಿಯಲ್ಲಿ ಆಪಾದಿತರ ವಿರುದ್ಧ ಮಾಡಲಾದ ಅನಧಿಕೃತ ಗೈರುಹಾಜರಿಯ ಆರೋಪವು ನಿಸ್ಸಂಶಯವಾಗಿ ಸಾಬೀತಾಗಿದೆಯೆಂದು ತಿಳಿಸಿರುತ್ತಾರೆ.

ಸದರಿ ಅಧಿಕಾರಿಯ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿದ್ದ ಕಾರಣ ಆಕುಕ ಸೇವೆಗಳು, ಬೆಂಗಳೂರು ಇವರು ಮೇಲೆ (6)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾ ವರದಿಯೊಂದಿಗೆ ತಿಳುವಳಿಕೆ ಪತ್ರದ ಮೂಲಕ ಆರೋಪಿತ ವೈದ್ಯಾಧಿಕಾರಿಗಳಿಗೆ ಜಾರಿ ಮಾಡಿ ಈ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ವಿವರಣೆಯನ್ನು ಕೋರಿದ್ದರು. ಸದರಿ ವೈದ್ಯರು ಈ ನೋಟೀಸನ್ನು ಪಡೆದಿದ್ದರೂ ಸಹ ತಮ್ಮ ರಕ್ಷಣಾ ಹೇಳಿಕೆಯನ್ನು ನಿಗಧಿತ ಅವಧಿಯಲ್ಲಿ ಸಲ್ಲಿಸದ ಕಾರಣ ಗೈರುಹಾಜರಿಯು ವಿಚಾರಣಾ ವರದಿಯಿಂದ ಸಾಬೀತಾಗಿದ್ದರಿಂದ, ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ರವರು ಮೇಲೆ ಓದಲಾದ (7)ರ ಪತ್ರದಲ್ಲಿ ಅಧಿಕಾರಿಯು ದಿನಾಂಕ: 01–03–2004 ರಿಂದ ಅನಧಿಕೃತ ಗೈರುಹಾಜರಾದ ಕಾರಣ ದಂಡನೆಯಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(VIII) ರಡಿ ಸರ್ಕಾರಿ ಸೇವೆಯಿಂದ ವಜಾಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆ ವಿಚಾರಣಾಧಿಕಾರಿಗಳ ವಿಚಾರಣಾ ವರದಿ, ಸಂಬಂಧಿಸಿದ ದಾಖಲೆಗಳನ್ನು ಹಾಗೂ ಸಾಕ್ಷಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಡಾ: ಇಫ್ತಿಕರ್ ಅಹ್ಮದ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೆಂಬೋಡಿ, ಕೋಲಾರ ತಾಲ್ಲೂಕು ಮತ್ತು ಜಿಲ್ಲೆ ಇವರು ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೆ ದಿನಾಂಕ: 01–03–2004 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು, ಪತ್ರಿಕಾ ಪ್ರಕಟಣೆಗೂ ಸ್ಪಂದಿಸದೆ ಇಲಾಖಾ ವಿಚಾರಣೆಗೂ ಹಾಜರಾಗದೇ ವಿಚಾರಣಾ ವರದಿಯನ್ನು ಸ್ವೀಕರಿಸಿ, ಸಮಜಾಯಿಷಿಯನ್ನು ಸಲ್ಲಿಸದೇ ಸ್ವಾಭಾವಿಕ ನ್ಯಾಯ ಪಡೆಯಲು ವಿಫಲವಾಗಿರುವುದರಿಂದ ಇವರನ್ನು ಕರ್ನಾಟಕ ನಾಗರೀಕ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(VIII) ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಜಾಗೊಳಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 135 ಎಂಎಸ್ಎ 2012 ಬೆಂಗಳೂರು, ದಿನಾಂಕ: 24–05–2012**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ, ಕರ್ನಾಟಕ ನಾಗರೀಕ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(VIII) ರಡಿಯಲ್ಲಿ ಡಾ: ಇಫ್ತಿಕರ್ ಅಹ್ಮದ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ. ಪ್ರಾಥಮಿಕ ಆರೋಗ್ಯ ಕೇಂದ್ರ. ಕೆಂಬೋಡಿ, ಕೋಲಾರ ತಾಲ್ಲೂಕು ಮತ್ತು ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಫ್. ಹುಬ್ಬಳ್ಳಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿಆರ್ ನಂ. 1567 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ :** ವಿದ್ಯುಚ್ಛಕ್ತಿ ಬಿಲ್ಲುಗಳ ಪಾವತಿಗಾಗಿ ರಾಜ್ಯ ಸರ್ಕಾರದಿಂದ ಗ್ರಾಮ ಪಂಚಾಯಿತಿಗಳಿಗೆ ಅನುದಾನವನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಜಡ್‌ಪಿಎ 2009, ದಿನಾಂಕ: 9–11–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಗ್ರಾಮ ಪಂಚಾಯತಿಗಳಿಗೆ ರಾಜ್ಯ ಸರ್ಕಾರವು ಬಿಡುಗಡೆ ಮಾಡಿದ ವಾರ್ಷಿಕ ಅನುದಾನದಲ್ಲಿ ವಿದ್ಯುತ್ ಬಿಲ್‌ಗಳ ಇತ್ಯರ್ಥಕ್ಕಾಗಿ ಕನಿಷ್ಠ ಶೇ. 75 ರಷ್ಟನ್ನು ಮೀಸಲಿಡತಕ್ಕದೆಂದು ಆದೇಶಿಸಿ ಸರ್ಕಾರಿ ಆದೇಶ ಹೊರಡಿಸಲಾಗಿತ್ತು. ವಿದ್ಯುತ್ ಬಿಲ್‌ಗಳ ಪಾವತಿಗಾಗಿ ಕನಿಷ್ಠ ಶೇ. 75 ರಷ್ಟನ್ನು ಮಾರ್ಪಡಿಸಿ ಶೇ. 60 ರಷ್ಟು ಮೀಸಲಿಡತಕ್ಕದೆಂದು ಸರ್ಕಾರವು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 566 ವೆಚ್ಚ–6: 2012 ಬೆಂಗಳೂರು, ದಿನಾಂಕ: 01–06–2012**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಿದ ವಾರ್ಷಿಕ ಅನುದಾನದಲ್ಲಿ ಅವುಗಳ ವಿದ್ಯುತ್ ಬಿಲ್‌ಗಳ ಇತ್ಯರ್ಥಕ್ಕಾಗಿ ಕನಿಷ್ಠ ಶೇ. 60 ರಷ್ಟನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮೀಸಲಿಡತಕ್ಕದೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿಆರ್ ನಂ. 1568 ಆರ್ಥಿಕ ಇಲಾಖೆ. (ವೆಚ್ಚ–5)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ನಾರಾಯಣ ಹೃದಯಾಲಯ ಆಸ್ಪತ್ರೆ, ಬೆಂಗಳೂರು ಈ ಆಸ್ಪತ್ರೆಯಲ್ಲಿ ಮಾನವ ಅಂಗಾಂಗಗಳ ಕಸಿಗಾಗಿ ಹೆಚ್ಚುವರಿ ಅಧಿಕಾರಯುಕ್ತ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** 1. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರ ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್/571(ಇ), ದಿನಾಂಕ: 31-07-2008.

2. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪ್ರಸ್ತಾವನೆ ಸಂಖ್ಯೆ: ಜೆಡಿಎಂ/ಎಂಡಿಪಿ/15/2011-2012, ದಿನಾಂಕ: 19-01-2012.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಯಲಯ, ಭಾರತ ಸರ್ಕಾರ, ನವದೆಹಲಿ ಇವರ ಅಧಿಸೂಚನೆಯಲ್ಲಿ ಮಾನವ ಅಂಗಾಂಗಗಳ ಕಸಿ ನಿಯಮಗಳು 1995ಕ್ಕೆ ಕೆಲವು ತಿದ್ದುಪಡಿಗಳನ್ನು ಮಾಡಲಾಗಿದೆ. ಸದರಿ ನಿಯಮಾವಳಿಯ ನಿಯಮ 6ಕ್ಕೆ ತಿದ್ದುಪಡಿ ಮಾಡಿರುವ ಪ್ರಕಾರ ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿ, ಆಸ್ಪತ್ರೆವಾರು ಹೆಚ್ಚುವರಿ ಅಧಿಕಾರಯುಕ್ತ ಸಮಿತಿಗಳು ಮತ್ತು ರಾಜ್ಯ ಹಾಗೂ ಜಿಲ್ಲಾ ಮಟ್ಟದ ಅಧಿಕಾರಯುಕ್ತ ಸಮಿತಿಗಳನ್ನು ರಚಿಸಬೇಕಾಗುತ್ತದೆ.

ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಬೆಂಗಳೂರಿನ ನಾರಾಯಣ ಹೃದಯಾಲಯ ಆಸ್ಪತ್ರೆಯು ವರ್ಷದಲ್ಲಿ 25 ಕ್ಕಿಂತ ಹೆಚ್ಚಿನ ಮಾನವ ಅಂಗಾಂಗಗಳ ಕಸಿಯನ್ನು ಮಾಡಿರುವುದರಿಂದ ಹಾಗೂ ಸದರಿ ತಿದ್ದುಪಡಿ ನಿಯಮಗಳಲ್ಲಿ ತಿಳಿಸಿರುವ ಷರತ್ತುಗಳನ್ನು ಪೂರೈಸಿರುವುದರಿಂದ ಸದರಿ ಆಸ್ಪತ್ರೆಯಲ್ಲಿ ಹೆಚ್ಚುವರಿ ಅಧಿಕಾರಯುಕ್ತ ಸಮಿತಿಯನ್ನು ರಚಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 26 ಎಪ್‌ಪಿಆರ್ 2012 ಬೆಂಗಳೂರು, ದಿನಾಂಕ: 01-06-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಾನವ ಅಂಗಾಂಗಗಳ ಕಸಿ (ತಿದ್ದುಪಡಿ) ನಿಯಮಗಳು 2008ರ ನಿಯಮ 6ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮಾನವ ಅಂಗಾಂಗಗಳ ಕಸಿ ಅಧಿನಿಯಮ 1994 ಹಾಗೂ ಸದರಿ ಅಧಿನಿಯಮದಡಿ ಕಾಲಕಾಲಕ್ಕೆ ರಚಿಸಲಾದ ನಿಯಮಗಳನ್ವಯ ಅದರಲ್ಲಿನ ಉಪ ಬಂಧಗಳನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರವು ಬೆಂಗಳೂರಿನ ನಾರಾಯಣ ಹೃದಯಾಲಯ ಆಸ್ಪತ್ರೆಯಲ್ಲಿ ಹೆಚ್ಚುವರಿ ಅಧಿಕಾರಯುಕ್ತ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ರಚಿಸಲು ಹರ್ಷಿಸುತ್ತದೆ.

| | | |
|---|---|---|
| 1. | ಡಾ: ಆಶಾ ಬಿ. ನಾಯಕ್, ವೈದ್ಯಕೀಯ ಅಧೀಕ್ಷಕರು, ನಾರಾಯಣ ಹೃದಯಾಲಯ ಆಸ್ಪತ್ರೆ, ಬೆಂಗಳೂರು | ಅಧ್ಯಕ್ಷರು |
| 2. | ಡಾ: ಜಾರ್ಜ್ ಚರಿಯನ್, ಅಕಾಡೆಮಿಕ್ ಹೆಡ್. ಕಾರ್ಡಿಯಕ್ ವಿಭಾಗ, ಸೀನಿಯರ್ ಕಾರ್ಡಿಯಕ್ ಕನ್ಸಲ್ಟೆಂಟ್, ನಾರಾಯಣ ಹೃದಯಾಲಯ ಆಸ್ಪತ್ರೆ, ಬೆಂಗಳೂರು | ಸದಸ್ಯರು |
| 3. | ಡಾ: ಮೋನಿ ಅಬ್ರಹಾಂ ಕುರಿಯಾಕೋಸ್, ಪ್ರೊಫೆಸರ್ ಆಫ್ ಸರ್ಜರಿ, ಡಿಪಾರ್ಟ್‌ಮೆಂಟ್ ಆಫ್ ಸರ್ಜಿಕಲ್ ಅಂಕಾಲಜಿ ಚೀಫ್ ಡಿವಿಷನ್ ಆಫ್ ಹೆಡ್ ಮತ್ತು ನೆಕ್ ಅಂಕಾಲಜಿ. ನಾರಾಯಣ ಹೃದಯಾಲಯ ಆಸ್ಪತ್ರೆ, ಬೆಂಗಳೂರು. | ಸದಸ್ಯರು |
| 4. | ಶ್ರೀ ಶ್ರೀಕಾಂತ್ ರಾಮನ್, ಚಾರ್ಟರ್ಡ್ ಅಕೌಂಟೆಂಟ್, ನಾರಾಯಣ ಹೃದಯಾಲಯ ಆಸ್ಪತ್ರೆ, ಬೆಂಗಳೂರು. | ಸದಸ್ಯರು |
| 5. | ಬ್ರಿಗೇಡಿಯರ್ ಐ.ಎನ್.ರೈ. ನಿವೃತ್ತ ಬ್ರಿಗೇಡಿಯರ್, ಭಾರತೀಯ ಸೈನಿಕ ಸೇವೆಗಳು ನಾರಾಯಣ ಹೃದಯಾಲಯ ಆಸ್ಪತ್ರೆ, ಬೆಂಗಳೂರು. | ಸದಸ್ಯರು |
| 6. | ಸರ್ಕಾರದ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು ಅಥವಾ ಅವರನ್ನು ಪ್ರತಿನಿಧಿಸುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳಿಗೆ ಸೇರಿದ ಜಂಟಿ ನಿರ್ದೇಶಕರ ಹುದ್ದೆಗಿಂತ ಕಡಿಮೆ ದರ್ಜೆಯಲ್ಲದ ನಾಮ ನಿರ್ದೇಶಿತ ಒಬ್ಬ ಅಧಿಕಾರಿ. | ಸದಸ್ಯರು |
| 7. | ನಿರ್ದೇಶಕರು<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಆನಂದರಾವ್ ವೃತ್ತ, ಬೆಂಗಳೂರು ಅಥವಾ ಅವರನ್ನು ಪ್ರತಿನಿಧಿಸುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳಿಗೆ ಸೇರಿದ ಉಪ ನಿರ್ದೇಶಕರ ಹುದ್ದೆಗಿಂತ ಕಡಿಮೆ ದರ್ಜೆಯಲ್ಲದ ನಾಮ ನಿರ್ದೇಶಿತ ಒಬ್ಬ ಅಧಿಕಾರಿ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿಆರ್ ನಂ. 1569

**HEALTH AND FAMILY WELFARE SECRETARIAT**

**Sub:** Constitution of Additional Authorisation Committee for Transplantation of Human Organs in Narayana Hrudayala Hospitals, Bangalore-regarding.

**Read:** 1. Notification No. GSR.571(E), dated: 31-07-2008. Issued by the Ministry of Health & Family Welfare, Govt. of India New Delhi.

**2.** Proposal No. J.D.M./MDP/15/2011-12, dated: 19-01-2012. From the Commissioner Health and Family Welfare Services, Bangalore.

**PREAMBLE:**

The Ministry of Health & Family Welfare. Government of India New Delhi, has made certain amendments to the Transplantation of Human Organs Rules 1995 vide Notification read at (1) above. According to the amendment made to Rule 6 of the said Rules State Level Authorisation Committee Constitution of Hospitals-wise Additional Authorisation Committees and State or District Level Authorisation Committees have to be Constituted.

The Commissioner Health and Family Welfare Services, Bangalore has sent proposal read at (2) above, for Constitution of Additional Authorisation Committee in Narayana Hrudayalaya Hospitals Bangalore as the said hospital has conducted more than 25 transplantations in a year and fulfils the conditions stipulated under the said amended Rules.

Government have examined the proposal in detail and hence the following order.

**Government Order No. HFW 26 FPR 2012 Bangalore, Dated: 01-06-2012**

In view of the circumstances explained in the preamble and in exercise of the powers conferred under Rule 6A of Transplantation of Human Organs (Amendment) Rules 2008, Government of Karnataka are pleased to constitute Additional Authorisation Committee in Narayana Hrudayala Hospitals, Bangalore for purposes of carrying out the provisions enunciated in Transplantation of Human Organs Act 1994 and the Rules framed thereunder from time to time with immediate effect as follows;

| | | |
|---|---|---|
| 1. | Dr. Asha B. Nayak,<br>Medical Superintendent, Narayana Hrudayala Hospitals, Bangalore | Chairman |
| 2. | Dr. George Cherian,<br>Academic Head Cardiac Division, Senior Cardiac Consultant.<br>Narayana Hrudayala Hospitals, Bangalore. | Member |
| 3. | Dr. Moni Abraham Kuriakose.<br>Professor of Surgery, Department of Surgical Oncology Chief, Division of Head and Neck Oncology.<br>Narayana Hrudayala Hospitals, Bangalore. | Member |
| 4. | Mr. Srikanth Raman,<br>Chartered Accountant<br>Narayana Hrudayalaya Hospitals, Bangalore. | Member |
| 5. | Brig. I.N. Rai.<br>Retd. Brigadier Indian Army Services,<br>Narayana Hrudayalaya Hospitals, Bangalore | Member |
| 6. | Secretary to Government, Health and Family Welfare Department, Vikas Soudha, Bangalore or Representated by an officer of Health & Family Welfare Services not below the rank of Joint Director as nominee. | Member |
| 7. | Director, Health and Family Welfare Services, Anandarao Circle, Bangalore or Represented by an officer of Health & Family Welfare Services not below the rank of Deputy Director as nominee. | Member |

By Order and and in the name of the Governor of Karnataka

PR No. 1569

**I. HEMANATH**

Under Secretary to Government

HEALTH AND FAMILY WELFARE DEPARTMENT.

## ಕಂದಾಯ ಸಚಿವಾಲಯ

**ವಿಷಯ:** ಶ್ರೀಮತಿ ಖಾಜಿ ನಫೀಸಾ ಮುತಾಲಿಬ್, ಹಿಂದಿನ ತಹಶೀಲ್ದಾರ್, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ ಪ್ರಸ್ತುತ ವಿಶೇಷ ತಹಶೀಲ್ದಾರ್, ಕೆಯುಐಡಿಎಫ್‌ಸಿ, ಬಳ್ಳಾರಿ ಅವರ ವಿರುದ್ಧ ಆರೋಪಗಳ ಕುರಿತು.

**ಓದಲಾಗಿದೆ:** 1) ಜಿಲ್ಲಾಧಿಕಾರಿ, ಬಳ್ಳಾರಿ, ಅವರ ಪತ್ರ ಸಂಖ್ಯೆ/ ಸಿಬ್ಬಂದಿ–1/53/2010–11 ದಿನಾಂಕ:09–08–2011

2) ಸರ್ಕಾರದ ಕಾರಣ ಕೇಳುವ ನೋಟಿಸು ಸಂಖ್ಯೆ:ಕಂ.ಇ.61 ಎಡಿಇ 2011 ದಿನಾಂಕ:10–10–2011

**ಪ್ರಸ್ತಾವನೆ:**

ಶ್ರೀಮತಿ ಖಾಜಿ ನಫೀಸಾ ಮುತಾಲಿಬ್, ಹಿಂದಿನ ತಹಶೀಲ್ದಾರ್, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ, ಇಲ್ಲಿ ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ತಾಲ್ಲೂಕು ಕಛೇರಿ ಹಗರಿಬೊಮ್ಮನಹಳ್ಳಿ ಸಿಬ್ಬಂದಿ ವರ್ಗದವರಿಗೆ ವಿನಾಕಾರಣ ಮಾನಸಿಕ ಹಿಂಸೆ ಹಾಗೂ ದೌರ್ಜನ್ಯದಿಂದ ತೊಂದರೆ ಕೊಡುತ್ತಿದ್ದು, ಅವರು ಹೇಳಿದಷ್ಟು ಹಣ ಕೊಡದಿದ್ದರೆ ಅವರಿಗೆ ತೊಂದರೆ ಕೊಡುವುದು, 2 ತಿಂಗಳಾದರೂ ವೇತನ ಬಿಲ್ಲುಗಳು ಸಹಿ ಮಾಡದಿರುವುದು, ಜನಸ್ಪಂದನ ಕಾರ್ಯಕ್ರಮಕ್ಕೆ ನಿಗದಿಪಡಿಸಿದ ಹಣ ದುರ್ಬಳಕೆ ಅವರ ಅಧೀನ ಸಿಬ್ಬಂದಿಗಳಿಗೆ ಮಾನಸಿಕ ಹಿಂಸೆ, ಕಿರುಕುಳ ದೌರ್ಜನ್ಯ ಹಾಗೂ ಅವಾಚ್ಯ ಶಬ್ದಗಳಿಂದ ಬೈಯುವುದು ಚುನಾವಣಾ ಕೆಲಸ ನಿರ್ವಹಿಸಿದ್ದಕ್ಕೆ ಗೌರವಧನ ನೀಡದಿರುವ ಬಗ್ಗೆ ಹಗರಿಬೊಮ್ಮನಹಳ್ಳಿ ಸಿಬ್ಬಂದಿಯವರ ಮನವಿಯ ಆಧಾರದ ಮೇಲೆ ಜಿಲ್ಲಾಧಿಕಾರಿ, ಬಳ್ಳಾರಿ ಅವರು ಆರೋಪಣಾ ಪಟ್ಟಿ ಅನುಬಂಧ 1ರಿಂದ 4 ರವರೆಗೆ ತಯಾರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಕಾರಣ ಕೇಳುವ ನೋಟೀಸ್‌ನ್ನು ಜಾರಿ ಮಾಡಿ, ಆರೋಪಿತ ಅಧಿಕಾರಿಯ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು. ಆರೋಪಿತ ಅಧಿಕಾರಿಯ ಮೇಲೆ ಮಾಡಲಾದ ಆರೋಪಗಳ ಬಗ್ಗೆ ವಿವರವಾದ ಹೇಳಿಕೆಯನ್ನು ಸಲ್ಲಿಸಿ, ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಗ್ರಾಮ ಲೆಕ್ಕಾಧಿಕಾರಿಗಳು, ಜಿಲ್ಲಾಧಿಕಾರಿ, ಬಳ್ಳಾರಿ ಅವರು ನಿಯೋಜಿಸಿದ ಸ್ಥಳದಲ್ಲಿ ಕರ್ತವ್ಯ ನಿರ್ವಹಿಸದೇ ತಮ್ಮ ತಮ್ಮ ಅನುಕೂಲದ ಪ್ರಕಾರ ಇತರೆ ಗ್ರಾಮಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಜಿಲ್ಲಾಧಿಕಾರಿ ಆದೇಶದಂತೆ ಕರ್ತವ್ಯ ನಿರ್ವಹಿಸಲು ಚಾರ್ಜನ್ನು ವಹಿಸಲು ಆದೇಶವನ್ನು ನೀಡಿದಾಗ, ಈ ಆದೇಶವನ್ನು ಪ್ರತಿಭಟಿಸಿರುತ್ತಾರೆ. ಹಾಗೂ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಅಂದಿನ ಜಿಲ್ಲಾಧಿಕಾರಿ ಗ್ರಾಮ ಲೆಕ್ಕಾಧಿಕಾರಿಗಳು ಅನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಟ್ಟಿರುವುದಕ್ಕಾಗಿ ಅವರಿಗೆ ಬುದ್ಧಿ ಹೇಳಿ ಕಳುಹಿಸಿ, ಅಂದಿನ ಜಿಲ್ಲಾಧಿಕಾರಿಗಳು ಈ ಪ್ರಕರಣವನ್ನು ಮುಕ್ತಾಯಗೊಳಿಸಿರುತ್ತಾರೆ. ಈ ಘಟನೆಯ ನಂತರ ಎಲ್ಲಾ ಸಿಬ್ಬಂದಿ ವರ್ಗದವರೊಂದಿಗೆ ಯಾವುದೇ ಮನಸ್ತಾಪ ಇಲ್ಲದೇ ಒಂದೂವರೆ ವರ್ಷ ಕಾಲ ಸುಗಮವಾಗಿ ತಾಲ್ಲೂಕಿನ ಕಾರ್ಯವನ್ನು ನಿರ್ವಹಿಸಿರುವುದಾಗಿ ತಿಳಿಸಿರುತ್ತಾರೆ. ತದನಂತರ ಅಪರ ಜಿಲ್ಲಾಧಿಕಾರಿ ಅವರು ಮತ್ತೆ ಈ ಕಡತವನ್ನು ತೆರೆದು ವಿಚಾರಣೆ ಪ್ರಾರಂಭಿಸಿರುವುದಾಗಿ ವಿಶದವಾಗಿ ತಿಳಿಸಿ, ಅವರ ಮೇಲಿನ ಎಲ್ಲಾ ಆರೋಪಗಳ ಬಗ್ಗೆ ಯಾವುದೇ ದಾಖಲೆಗಳು ಲಗತ್ತಿಸಿರುವುದಿಲ್ಲ ಹಾಗೂ ಅನುಬಂಧ–4ರಲ್ಲಿ ಆರೋಪಗಳ ಕುರಿತು ಯಾವುದೇ ಸಾಕ್ಷಿಗಳನ್ನು ನಮೂದಿಸದಿರುವುದರಿಂದ ಆಡಳಿತಾತ್ಮಕ ದೃಷ್ಟಿಯಿಂದ ತೆಗೆದುಕೊಂಡಿರುವ ಕ್ರಮಗಳಿಗೆ ಬಾವುಕ ವೇಗದಲ್ಲಿ ಪ್ರತಿಭಟಿಸಿರುವ ಅವರ ಸಿಬ್ಬಂದಿ ವರ್ಗ ಮತ್ತು ಅವರಿಗೂ ಕ್ಷಮಿಸಿ ಮುಂದಿನ ಶಿಸ್ತಿನ ಕ್ರಮವನ್ನು ಕೈಬಿಡಲು ಕೋರಿರುತ್ತಾರೆ.

ಈ ಪ್ರಕರಣಗಳಿಗೆ ಸಂಬಂಧಿಸಿದಂತೆ ಆರೋಪಿತ ಅಧಿಕಾರಿ ನೀಡಿರುವ ಹೇಳಿಕೆಯನ್ನು ಸರ್ಕಾರವು ಪರಿಶೀಲಿಸಿ, ಶ್ರೀಮತಿ ಖಾಜಿ ನಫೀಸಾ ಮುತಾಲಿಬ್, ಹಿಂದಿನ ತಹಶೀಲ್ದಾರ್, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ, ಅವರುಗಳ ಮೇಲಿನ ಆರೋಪದಿಂದ ಮುಕ್ತಗೊಳಿಸಲು ನಿರ್ಧರಿಸಿರುವುದಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 61 ಎಡಿಇ 2011, ಬೆಂಗಳೂರು, ದಿನಾಂಕ:05–06–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀಮತಿ ಖಾಜಿ ನಫೀಸಾ ಮುತಾಲಿಬ್, ಹಿಂದಿನ ತಹಶೀಲ್ದಾರ್, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ, ಪ್ರಸ್ತುತ ವಿಶೇಷ ತಹಶೀಲ್ದಾರ್, ಕೆಯುಐಡಿಎಫ್‌ಸಿ, ಬಳ್ಳಾರಿ ಅವರು ತಮ್ಮ ಅಧೀನ ಸಿಬ್ಬಂದಿ ವರ್ಗದವರೊಂದಿಗೆ ಸೌಜನ್ಯವಾಗಿ ವರ್ತಿಸುವಂತೆ ಸೂಚಿಸಿ ಹಾಗೂ ಇನ್ನು ಮುಂದೆ ಆ ರೀತಿಯ ಪ್ರಕರಣ ಮರುಕಳಿಸದಂತೆ ಎಚ್ಚರಿಕೆ ನೀಡಿ, ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ ರಾಮಲಿಂಗಯ್ಯ**

ಪಿ.ಆರ್. 1596 ಸರ್ಕಾರದ ಅಧೀನ ಕಾರ್ಯದರ್ಶಿಗಳು

ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಕಂಇ 213 ಮುನೋಮು 2011 ಬೆಂಗಳೂರು, ದಿನಾಂಕ: 04–06–2012**

ಸರ್ಕಾರದ ಆದೇಶ ಸಂಖ್ಯೆ: ಕಂಇ 213 ಮುನೋಮು 2011 ದಿನಾಂಕ: 13–01–2012ರ ಆದೇಶ ಭಾಗದ ಕಂಡಿಕೆ 2ರಲ್ಲಿ ಪರಿಷ್ಕೃತ ದರವನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು:

| ವರ್ಷ | ಸಿಎಂಎಸ್ ಕಂಪ್ಯೂಟರ್ಸ್ ನಿರ್ವಹಿಸುವ ಬೆಂಗಳೂರು ಜಿಲ್ಲೆ | ಸಿಎಂಎಸ್ ಕಂಪ್ಯೂಟರ್ಸ್ ನಿರ್ವಹಿಸುವ ಬೆಂಗಳೂರು ಹೊರತುಪಡಿಸಿದ ಜಿಲ್ಲೆಗಳು | ಇಸಿಐಎಲ್ ನಿರ್ವಹಿಸುವ ಜಿಲ್ಲೆಗಳು | ಮೆ: ಸಿ–ಡಾಕ್ ರವರಿಗೆ ಪಾವತಿಸಬೇಕಾಗುವ ದರಗಳು |
|---|---|---|---|---|
| 16ನೇ ಅಕ್ಟೋಬರ್, 2011 ರಿಂದ 15ನೇ ಜುಲೈ 2012 | ರೂ.18/– | ರೂ. 27.50 | ರೂ. 28/– | ನಾಲ್ಕು (4)ಜನ ಇಂಜಿನಿಯರುಗಳಿಗೆ ತಲಾ ರೂ. 90.000 ಮತ್ತು ಅನ್ವಯಿಸುವ ತೆರಿಗೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ನೋ&ಮು)

ಪಿ.ಆರ್. 1597

## HOME SECRETARIAT

**Sub :** Reimbursing the cost of medical treatment to the members of the Media, private citizens, Policemen and the Advocates who were injured in the violence that erupted on 2nd March, 2012 in the City Civil Court Complex at Bangalore.

**Read :** Letter No. MAG(1) CR4/2011-12 dated: 23-04-2012 received from the Deputy Commissioner, Bangalore District Bangalore.

**Preamble :**

On 2nd March, 2012, due to sudden eruption of violence between the Media persons and Advocates followed by Police lathi charge a number of Police-men, Media-persons and Advocates were injured. During the incident several two Wheelers and four wheelers were set on fire and burnt.

The Hon'ble Chief Ministers had announced that the Government would reimburse the expenditure incurred on the medical treatment of the injured in the violence and the owners of the burnt vehicals would also be eligible to receive appropriate compensation from the Government.

In the letter read above, the Deputy Comissioner Bangalore has stated that 24 applications have been received so far, claiming compensation towards medical expenses and also towards burnt and destroyed vehicals. out of 24 applications,16 appllications have been considered and an estimated amount of Rs.14,43,075/- (Rupes Fourteen lakhs forty three thousand and seventy five only) is required. 8 more applications are pending scrutiny for want of proper documents and details.

In all, an amount of Rs. 20,00,000/- (Rupees Twenty Lakhs only) is requested to be released towards compensation for the applications received. Hence this order.

**GOVERNMENT ORDER NO. HD 10 CRR 2012 BANGALORE, DATED 06/06/2012.**

Under the circumstance explained above, Government are pleased to release a sum of Rs. 20,00,000/- (Rupees Twenty Lakhs only) under the Head of Account "2235-60-200-3-01-100 General Relief to persons Affected by Riots-Financial Assistance/Relief " towards reimbursement of the expenditure incurred on medical treatment to the persons who were injured in the violence and police lathi charge on 2nd March, 2012 in the City Civil Court Complex, Bangalore. The Deputy Commissioner, Bangalore District, Bangalore is hereby authorized to sanction appropriate medical relief as well as the compensation for the burnt vehicals as per rules, after scrutiny of claims supported by adequate evidence and documents. The amount shall be utilized properly for the purpose released during the current financial year and the Utilisation Certificate with proper break-up details be submitted to Government without fail.

This order issues with the concurrence of the Finance Department vide their U.O. Note No. PS(B&R)13389 LMS 2012 dated: 05-06-2012.

By Order and in the name of the Governor of Karnataka,

**Prakash Y.K**

Under Secretary to Government

Home Department (Law & Order)

P.R. 1598

## ಒಳಾಡಳಿತ ಸಚಿವಾಲಯ

**ವಿಷಯ:** 2012–13 ನೇ ಸಾಲಿನ ಪೊಲೀಸ್ ಇಲಾಖೆಯಲ್ಲಿ ಪೊಲೀಸ್ ಅಧಿಕಾರಿ/ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 ದಿ:24–08–2009.
2) ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009(ಭಾ–2)ದಿ:13–01–2011.
3) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001 ದಿ:22–11–2001.
4) ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 (ಭಾಗ–2) ದಿ:21–05–2011.
5) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 12 ಸೇನೌವ 2012 ದಿ:28–04–2012.
6) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 12 ಸೇನೌವ 2012 ದಿ:29–05–2012.

**ಪ್ರಸ್ತಾವನೆ:**

ಮೇಲೆ (4) ರಲ್ಲಿ ಓದಲಾದ ದಿನಾಂಕ 21–05–2011ರ ಸರ್ಕಾರಿ ಆದೇಶದಲ್ಲಿ ಪೊಲೀಸ್ ಅಧಿಕಾರಿ ಮತ್ತು ಪೊಲೀಸ್ ಸಿಬ್ಬಂದಿಗಳ ವರ್ಗಾವಣೆ ಕುರಿತಂತೆ ವಿಸ್ತೃತವಾದ ಮಾರ್ಗಸೂಚಿಗಳನ್ನು ನೀಡಲಾಗಿದೆ.

2012–13ನೇ ಸಾಲಿನಲ್ಲಿ ಪೊಲೀಸ್ ಸಿಬ್ಬಂದಿ ಮಂಡಳಿ (Police Establishment board)ಯ ವ್ಯಾಪ್ತಿಗೊಳಪಡುವ ಪೊಲೀಸು ಸಿಬ್ಬಂದಿಯನ್ನು ಹೊರತುಪಡಿಸಿ ಸಾಮಾನ್ಯ ವರ್ಗಾವಣೆಯನ್ನು ದಿನಾಂಕ: 25–05–2012ರ ವರೆಗೆ ಮಾಡುವ ಬಗ್ಗೆ ಮೇಲೆ ಓದಲಾದ (5)ರ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಆದೇಶಿಸಿದೆ.

ತದನಂತರ ಮೇಲೆ ಓದಲಾದ (6)ರ ಆದೇಶದಲ್ಲಿ ವರ್ಗಾವಣೆ ಅವಧಿಯನ್ನು ಮತ್ತೆ ವಿಸ್ತರಿಸುವುದು ಅವಶ್ಯವೆಂದು ಪರಿಗಣಿಸಿ ದಿನಾಂಕ 15–06–2012 ರವರೆಗೆ ಮಾಡಬಹುದು ಎಂದು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಆದೇಶಿಸಿದೆ.

ಈ ಹಿನ್ನೆಲೆಯಲ್ಲಿ ಪೊಲೀಸ್ ಸಿಬ್ಬಂದಿ ಮಂಡಳಿಯ (Police Establishment Board) ವ್ಯಾಪ್ತಿಗೊಳಪಡುವ ಪೊಲೀಸ್ ಇಲಾಖೆಯಲ್ಲಿನ ಅಧಿಕಾರಿ / ಸಿಬ್ಬಂದಿಗಳ ವರ್ಗಾವಣೆಗಳ ಬಗ್ಗೆ ಮೇಲೆ (5) ರಲ್ಲಿ ಓದಲಾದ ದಿನಾಂಕ 28–04–2012ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಸರ್ಕಾರದ ಆದೇಶದ ಮಾರ್ಗಸೂಚಿಗಳನ್ವಯ ಅನುಸರಿಸಿ ವರ್ಗಾವಣೆಗಳನ್ನು ಮಾಡುವ ಬಗ್ಗೆ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 148 ಪೊಸಇ 2012 ಬೆಂಗಳೂರು, ದಿನಾಂಕ: 02/06/2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ದಿನಾಂಕ 28–04–2012ರ ಸರ್ಕಾರಿ ಆದೇಶದಲ್ಲಿ ನಮೂದಿಸಿರುವ ಅಂಶಗಳನ್ನು ಆಧರಿಸಿ ಪೊಲೀಸ್ ಇಲಾಖೆಯಲ್ಲಿ 2012–13ನೇ ಸಾಲಿನಲ್ಲಿ ಪೊಲೀಸ್ ಸಿಬ್ಬಂದಿ ಮಂಡಳಿಯ (Police Establishment Board)ಯ ವ್ಯಾಪ್ತಿಗೊಳಪಡುವ ಪೊಲೀಸ್ ಇಲಾಖೆಯ ಅಧಿಕಾರಿ / ಸಿಬ್ಬಂದಿಗಳ ವರ್ಗಾವಣೆಗಳನ್ನು ಈ ಕೆಳಕಂಡ ಸಂದರ್ಭಗಳಲ್ಲಿ ಮಾಡಬಹುದಾಗಿದೆ.

1) ಖಾಲಿ ಇರುವ, ಆಡಳಿತಾತ್ಮಕ ಹಿತದೃಷ್ಟಿಯಿಂದ, ಅತ್ಯಾವಶ್ಯಕವಾಗಿ ತುಂಬಬೇಕಾದ ಹುದ್ದೆಗಳ ಪ್ರಕರಣಗಳು, ತತ್ಪರಿಣಾಮವಾಗಿ ಖಾಲಿಯಾಗುವ ಹುದ್ದೆಗಳನ್ನು ಭರ್ತಿ ಮಾಡುವ ಪ್ರಕರಣಗಳು;
2) ಪತಿ–ಪತ್ನಿ ಪ್ರಕರಣಗಳು;
3) ಪರಸ್ಪರ ವರ್ಗಾವಣೆಗಳು– ಸಂಬಂಧಿಸಿದ ಸಿಬ್ಬಂದಿಯ ಒಪ್ಪಿಗೆ ಪತ್ರದೊಂದಿಗೆ;
4) ತೀವ್ರತರವಾದ ಖಾಯಿಲೆಯಿಂದ ಬಳಲುತ್ತಿರುವ ನೌಕರರ / ನೌಕರರ ಅವಲಂಬಿತರ / ತಂದೆ ತಾಯಿಯವರ ವೈದ್ಯಕೀಯ ಚಿಕಿತ್ಸೆ / ಆರೋಗ್ಯದ ಹಿತದೃಷ್ಟಿಯಿಂದ ಈ ಮಾಡಬೇಕಾದ ವರ್ಗಾವಣೆಗಳು;
5) ಸಾರ್ವಜನಿಕರಿಂದ ಸ್ವೀಕೃತವಾದ ದೂರುಗಳ ಮೇರೆಗೆ ಇಲಾಖಾ ವಿಚಾರಣೆಗೊಳಪಟ್ಟ ಪ್ರಕರಣಗಳು;
6) ಮುಂಬಡ್ತಿಯಿಂದ ತುಂಬಬೇಕಾದ ಖಾಲಿ ಹುದ್ದೆಗಳಿಗೆ ಮಾತ್ರ.
7) ಮುಂದಿನ ಎರಡು ವರ್ಷಗಳಲ್ಲಿ ನಿವೃತ್ತಿ ಹೊಂದಲಿರುವ ಸಿಬ್ಬಂದಿಯ ಕೋರಿಕೆಗಳು.

2. ಒಂದು ಇಲಾಖೆಯಿಂದ ಇನ್ನೊಂದು ಇಲಾಖೆಗೆ ಅಧಿಕಾರಿ / ನೌಕರರ ನಿಯೋಜನೆಯನ್ನು ವರ್ಗಾವಣೆ ಅವಧಿಯಲ್ಲಿ ಮಾತ್ರ ಮಾಡತಕ್ಕದ್ದು. ಸಂಬಂಧಿತ ಇಲಾಖೆಯ ಸ್ಪಷ್ಟ ಕೋರಿಕೆಯಿಲ್ಲದೇ ನಿಯೋಜನೆ ಮೇಲೆ ನೇಮಕ ಮಾಡತಕ್ಕದ್ದಲ್ಲ.

3. ಯಾವುದೇ ಅಧಿಕಾರಿ / ನೌಕರರು ಕಡ್ಡಾಯ ನಿರೀಕ್ಷಣೆ ಸಂದರ್ಭಗಳು ಉದ್ಭವವಾಗದ ರೀತಿಯಲ್ಲಿ ವಗಾವಣೆಗಳನ್ನು ಮಾಡತಕ್ಕದ್ದು.

4. ಪ್ರತಿ ವೃಂದದ ವರ್ಗಾವಣೆಗಳು ವೃಂದ ಬಲದ ಶೇಕಡಾ 20 ರಿಂದ 25 ರಷ್ಟು ಮೀರತಕ್ಕದ್ದಲ್ಲ.

ದಿನಾಂಕ 21–05–2011ರ ಸರ್ಕಾರದ ಆದೇಶದಲ್ಲಿ ನಮೂದಿಸಿದ ಷರತ್ತುಗಳೊಂದಿಗೆ ಪೊಲೀಸ್ ಇಲಾಖೆಯ ಅಧಿಕಾರಿ / ಸಿಬ್ಬಂದಿಗಳ ವರ್ಗಾವಣೆ ಪ್ರಕ್ರಿಯೆಗಳನ್ನು ಪೊಲೀಸ್ ಸಿಬ್ಬಂದಿ ಮಂಡಳಿಯ (Police Establishment Board) ಶಿಫಾರಸ್ಸುಗಳ ಮೇಲೆ ಈ ಆದೇಶದ ದಿನಾಂಕದಿಂದ ದಿನಾಂಕ 15–06–2012ರ ಅವಧಿಯಲ್ಲಿ ಮಾಡತಕ್ಕದ್ದು. ಈ ಅವಧಿಯ ನಂತರ ಯಾವುದೇ ವರ್ಗಾವಣೆ ಮಾಡಬೇಕಾದಲ್ಲಿ ಸಂಬಂಧಿತ ಪೊಲೀಸ್ ಸಿಬ್ಬಂದಿ ಮಂಡಳಿಯ (Police Establishment Board) ಶಿಫಾರಸ್ಸಿನೊಂದಿಗೆ ಮಾನ್ಯ ಮುಖ್ಯಮಂತ್ರಿಯವರ ಪೂರ್ವಾನುಮೋದನೆಯನ್ನು ಕಡತದಲ್ಲಿ ಪಡೆದ ನಂತರವೇ ಮಾಡತಕ್ಕದ್ದು.

ಉಳಿದಂತೆ ಪೊಲೀಸ್ ಸಿಬ್ಬಂದಿಗಳ ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಸರ್ಕಾರಿ ಆದೇಶ ಸಂಖ್ಯೆ: ಒಇ 60 ಪೊಸಇ 2009 (ಭಾಗ–2) ದಿನಾಂಕ 21–05–2011 ಆದೇಶದಲ್ಲಿನ ಮಾರ್ಗಸೂಚಿಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಪೊಲೀಸ್ ಇಲಾಖೆಯ ಲಿಪಿಕ ನೌಕರರಿಗೆ ಸಂಬಂಧಿಸಿದಂತೆ ದಿನಾಂಕ 28–04–2012ರ ಸರ್ಕಾರಿ ಆದೇಶದಂತೆ ವರ್ಗಾವಣೆಗಳನ್ನು ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ನಿಂಗಪ್ಪ**

ಪಿ.ಆರ್. 1599

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಕಟಾವೀರನಹಳ್ಳಿ ಗ್ರಾಮದ ಹತ್ತಿರ ಕಳ್ಳಂಬೆಳ್ಳ ಕೆರೆಯ ಪೋಷಕ ನಾಲೆಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಪಿಕಪ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಎ.ಐ.ಬಿ.ಪಿ ಕಾರ್ಯಕ್ರಮದಡಿ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸನೀಇ 12 ಮಸಾವಿ (ತಾಂತ್ರಿಕ) 2011(13) ದಿನಾಂಕ: 05.03.2011

2) ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ರವರ ಪ್ರಸ್ತಾವನೆ.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಕಟಾವೀರನಹಳ್ಳಿ ಗ್ರಾಮದ ಹತ್ತಿರ ಕಳ್ಳಂಬೆಳ್ಳ ಕೆರೆಯ ಪೋಷಕ ನಾಲೆಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಪಿಕಪ್ ನಿರ್ಮಾಣ ಕಾಮಗಾರಿಯ ರೂ 550.00 ಲಕ್ಷ ಮೊತ್ತದ ಅಂದಾಜಿಗೆ ತಾತ್ವಿಕ ಆಡಳಿತಾತ್ಮಕ ಅನುಮೋದನೆ ನೀಡಿ ಭಾರತ ಸರ್ಕಾರದ ಅನುಮೋದನೆಗಾಗಿ ಸಲ್ಲಿಸಲಾಗಿತ್ತು. ಈ ಪ್ರಸ್ತಾವನೆಗೆ ಭಾರತ ಸರ್ಕಾರದ ಪತ್ರದ ಸಂಖ್ಯೆ 10–23/2010–MI (Pt.V) dated 24.03.2011 ರಲ್ಲಿ ಅನುಮೋದನೆ ದೊರಕಿರುತ್ತದೆ. ಈ ಕಾಮಗಾರಿಯ ಅಂದಾಜಿಗೆ ದಿನಾಂಕ 04.12.2010 ರಂದು ನಡೆದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಸಭೆಯಲ್ಲಿ ತೀರುವಳಿ ದೊರಕಿರುತ್ತದೆ.

ಮೇಲ್ಕಂಡ ಕಾಮಗಾರಿಯ ಅಂದಾಜು ಪಟ್ಟಿಯನ್ನು 2011–12ನೇ ಸಾಲಿಗೆ ಮುಂದುವರೆಸಿರುವ 2010–11ನೇ ಸಾಲಿನ ದರಪಟ್ಟಿಯ ದರಗಳನ್ನಳವಡಿಸಿ ತಯಾರಿಸಲಾಗಿದ್ದು ಉದ್ದೇಶಿತ ಬ್ಯಾರೇಜಿನ ಉದ್ದ–49.00 ಮೀ., 1.70ಮೀ x 5.00ಮೀ ಅಳತೆಯ 20 ಕಿಂಡಿಗಳು ನೀರಿನ ಶೇಕರಣಾ ಸಾಮರ್ಥ್ಯ ಒಟ್ಟು–0.63 ದಶಲಕ್ಷ ಘನ ಮೀಟರ್ ರಸ್ತೆ ಅಗಲ–5.50 ಮೀಟರ್ ಆಗಿರುತ್ತದೆ. ಫಲಾನುಭವಿ ಗ್ರಾಮಗಳು–ಕಾತವೀರನಹಳ್ಳಿ, ಮುಡಿಮಡಗು, ಯಲದಬಾಗಿ ಆಗಿದ್ದು ಈ ಯೋಜನೆಯಿಂದ 280 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ಉದ್ದೇಶಿಸಲಾಗಿದೆ. ಯೋಜನೆಯ ಲಾಭ ವೆಚ್ಚದ ಅನುಪಾತ 1.16 ಆಗಿರುತ್ತದೆ.

ರೂ. 550.00 ಲಕ್ಷಗಳ ಅಂದಾಜು ಮೊತ್ತದ ಈ ಕಾಮಗಾರಿಯ ಅಂದಾಜಿಗೆ ಲೆಕ್ಕ ಶಿರ್ಷಿಕೆ "4702–00–101–1–10–139 ಎ.ಐ.ಬಿ.ಪಿ ಕಾಮಗಾರಿಗಳು" ರಡಿಯಲ್ಲಿ ಈ ಹಿಂದೆ ನೀಡಿರುವ ಆಡಳಿತಾತ್ಮಕ ಅನುಮೋದನೆಯನ್ನು ಸ್ಥಿರಗೊಳಿಸಲು ಪರಿಗಣಿಸಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 96 ಮಸಾವಿ 2011(3)(ತಾಂತ್ರಿಕ) ಬೆಂಗಳೂರು, ದಿನಾಂಕ: 05ಜೂನ್ 2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಕಟಾವೀರನಹಳ್ಳಿ ಗ್ರಾಮದ ಹತ್ತಿರ ಕಳ್ಳಂಬೆಳ್ಳ ಕೆರೆಯ ಪೋಷಕ ನಾಲೆಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಪಿಕಪ್ ನಿರ್ಮಾಣ ಕಾಮಗಾರಿಯ ರೂ. 550.00 ಲಕ್ಷ ಮೊತ್ತದ ಅಂದಾಜಿಗೆ (ರೂ. ಐದುನೂರ ಐವತ್ತು ಲಕ್ಷಗಳು ಮಾತ್ರ) ಮೊತ್ತದ ಅಂದಾಜು ಪಟ್ಟಿಗೆ ಸರ್ಕಾರವು ಈ ಹಿಂದೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆಯನ್ನು ಸ್ಥಿರಗೊಳಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ ಲೋಇ–622–ಅಕೋ–1/11 ದಿನಾಂಕ: 20.08.2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿ.ಆರ್. 1600

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಹಾಲಜ್ಜನಪಾಳ್ಯ ಗ್ರಾಮದ ಹತ್ತಿರ ಸುವರ್ಣಮುಖಿ ನದಿಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಪಿಕಪ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಎ.ಐ.ಬಿ.ಪಿ ಕಾರ್ಯಕ್ರಮದಡಿ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸನೀಇ 12 ಮಸಾವಿ (ತಾಂತ್ರಿಕ) 2011(11) ದಿನಾಂಕ: 05.03.2011.

2) ಮುಖ್ಯ ಇಂಜನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ರವರ ಪ್ರಸ್ತಾವನೆ.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಹಾಲಜ್ಜನಪಾಳ್ಯ ಗ್ರಾಮದ ಹತ್ತಿರ ಸುವರ್ಣಮುಖಿ ನದಿಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಪಿಕಪ್ ನಿರ್ಮಾಣ ಕಾಮಗಾರಿಯ ರೂ 685.00 ಲಕ್ಷ ಮೊತ್ತದ ಅಂದಾಜಿಗೆ ತಾತ್ವಿಕ ಆಡಳಿತಾತ್ಮಕ ಅನುಮೋದನೆ ನೀಡಿ ಭಾರತ ಸರ್ಕಾರದ ಅನುಮೋದನೆಗಾಗಿ ಸಲ್ಲಿಸಲಾಗಿತ್ತು. ಈ ಪ್ರಸ್ತಾವನೆಗೆ ಭಾರತ ಸರ್ಕಾರದ ಪತ್ರದ ಸಂಖ್ಯೆ F-No 10–23/2010–MI (Pt. V) dated 24.03.2011 ರಲ್ಲಿ ಅನುಮೋದನೆ ದೊರಕಿರುತ್ತದೆ. ಈ ಕಾಮಗಾರಿಯ ಅಂದಾಜಿಗೆ ದಿನಾಂಕ 04.12.2010 ರಂದು ನಡೆದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಸಭೆಯಲ್ಲಿ ತೀರುವಳಿ ದೊರಕಿರುತ್ತದೆ.

ಮೇಲ್ಕಂಡ ಕಾಮಗಾರಿಯ ಅಂದಾಜು ಪಟ್ಟಿಯನ್ನು 2011–12ನೇ ಸಾಲಿಗೆ ಮುಂದುವರೆಸಿರುವ 2010–11ನೇ ಸಾಲಿನ ದರಪಟ್ಟಿಯ ದರಗಳನ್ನಳವಡಿಸಿ ತಯಾರಿಸಲಾಗಿದ್ದು ಉದ್ದೇಶಿತ ಬ್ಯಾರೇಜಿನ ಉದ್ದ–126.50ಮೀ., 1.70ಮೀ x 3.00ಮೀ ಅಳತೆಯ 52 ಕಿಂಡಿಗಳು, ನೀರಿನ ಶೇಕರಣಾ ಸಾಮರ್ಥ್ಯ ಒಟ್ಟು–0.93 ದಶಲಕ್ಷ ಘನ ಮೀಟರ್, ರಸ್ತೆ ಅಗಲ–5.50 ಮೀಟರ್ ಆಗಿರುತ್ತದೆ. ಫಲಾನುಭವಿ ಗ್ರಾಮಗಳು– ಹಾಲಜ್ಜನಪಾಳ್ಯ ಹುಣಿಸೇಹಳ್ಳಿ ಆಗಿದ್ದು ಈ ಯೋಜನೆಯಿಂದ 380 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ಉದ್ದೇಶಿಸಲಾಗಿದೆ. ಯೋಜನೆಯ ಲಾಭ ವೆಚ್ಚದ ಅನುಪಾತ 1:25 ಆಗಿರುತ್ತದೆ.

ರೂ. 685.00 ಲಕ್ಷಗಳ ಅಂದಾಜು ಮೊತ್ತದ ಈ ಕಾಮಗಾರಿಯ ಅಂದಾಜಿಗೆ ಲೆಕ್ಕ ಶೀರ್ಷಿಕೆ “4702–00–101–1–10–139 ಎ.ಐ.ಬಿ.ಪಿ ಕಾಮಗಾರಿಗಳು” ರಡಿಯಲ್ಲಿ ಈ ಹಿಂದೆ ನೀಡಿರುವ ಆಡಳಿತಾತ್ಮಕ ಅನುಮೋದನೆಯನ್ನು ಸ್ಥಿರಗೊಳಿಸಲು ಪರಿಗಣಿಸಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 96 ಮಸಾವಿ 2011(2)(ತಾಂತ್ರಿಕ) ಬೆಂಗಳೂರು, ದಿನಾಂಕ: 05 ಜೂನ್ 2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಹಾಲಜ್ಜನಪಾಳ್ಯ ಗ್ರಾಮದ ಹತ್ತಿರ ಸುವರ್ಣಮುಖಿ ನದಿಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಪಿಕಪ್ ನಿರ್ಮಾಣ ಕಾಮಗಾರಿಯ ರೂ. 685.00 ಲಕ್ಷ ಮೊತ್ತದ ಅಂದಾಜಿಗೆ (ರೂ. ಆರು ನೂರ ಎಂಭತ್ತೈದು ಲಕ್ಷಗಳು ಮಾತ್ರ) ಮೊತ್ತದ ಅಂದಾಜು ಪಟ್ಟಿಗೆ ಸರ್ಕಾರವು ಈ ಹಿಂದೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆಯನ್ನು ಸ್ಥಿರಗೊಳಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ ಲೋಇ–622–ಅಕೋ–1/11 ದಿನಾಂಕ: 20.08.2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿ.ಆರ್. 1601

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಹೆರೂರು ಗ್ರಾಮದ ಹತ್ತಿರ ಸುವರ್ಣಮುಖಿ ನದಿಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಪಿಕಪ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಎ.ಐ.ಬಿ.ಪಿ ಕಾರ್ಯಕ್ರಮದಡಿ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸನೀಇ 12 ಮಸಾವಿ (ತಾಂತ್ರಿಕ) 2011(12) ದಿನಾಂಕ: 05.03.2011.

2) ಮುಖ್ಯ ಇಂಜನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ರವರ ಪ್ರಸ್ತಾವನೆ.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಹೆರೂರು ಗ್ರಾಮದ ಹತ್ತಿರ ಸುವರ್ಣಮುಖಿ ನದಿಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಪಿಕಪ್ ನಿರ್ಮಾಣ ಕಾಮಗಾರಿಯ ರೂ 665.00 ಲಕ್ಷ ಮೊತ್ತದ ಅಂದಾಜಿಗೆ ತಾತ್ವಿಕ ಆಡಳಿತಾತ್ಮಕ ಅನುಮೋದನೆ ನೀಡಿ ಭಾರತ ಸರ್ಕಾರದ ಅನುಮೋದನೆಗಾಗಿ ಸಲ್ಲಿಸಲಾಗಿತ್ತು. ಈ ಪ್ರಸ್ತಾವನೆಗೆ ಭಾರತ ಸರ್ಕಾರದ ಪತ್ರದ ಸಂಖ್ಯೆ 10–23/2010–MI (Pt. V) dated 24.03.2011 ರಲ್ಲಿ ಅನುಮೋದನೆ ದೊರಕಿರುತ್ತದೆ. ಈ ಕಾಮಗಾರಿಯ ಅಂದಾಜಿಗೆ ದಿನಾಂಕ 04.12.2010 ರಂದು ನಡೆದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಸಭೆಯಲ್ಲಿ ತೀರುವಳಿ ದೊರಕಿರುತ್ತದೆ.

ಮೇಲ್ಕಂಡ ಕಾಮಗಾರಿಯ ಅಂದಾಜು ಪಟ್ಟಿಯನ್ನು 2011–12ನೇ ಸಾಲಿಗೆ ಮುಂದುವರೆಸಿರುವ 2010–11ನೇ ಸಾಲಿನ ದರಪಟ್ಟಿಯ ದರಗಳನ್ನಳವಡಿಸಿ ತಯಾರಿಸಲಾಗಿದ್ದು ಉದ್ದೇಶಿತ ಬ್ಯಾರೇಜಿನ ಉದ್ದ–116.70ಮೀ., 1.70ಮೀ x 3.00ಮೀ ಅಳತೆಯ 48 ಕಿಂಡಿಗಳು, ನೀರಿನ ಶೇಕರಣಾ ಸಾಮರ್ಥ್ಯ ಒಟ್ಟು–0.93 ದಶಲಕ್ಷ ಘನ ಮೀಟರ್, ರಸ್ತೆ ಅಗಲ–5.50 ಮೀಟರ್ ಆಗಿರುತ್ತದೆ. ಫಲಾನುಭವಿ ಗ್ರಾಮಗಳು– ಹೆರೂರು ಮುದ್ದೇನಹಳ್ಳಿ, ಹುಣಿಸೇಹಳ್ಳಿ ಆಗಿದ್ದು ಈ ಯೋಜನೆಯಿಂದ 350 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ಉದ್ದೇಶಿಸಲಾಗಿದೆ. ಯೋಜನೆಯ ಲಾಭ ವೆಚ್ಚದ ಅನುಪಾತ 1:21 ಆಗಿರುತ್ತದೆ.

ರೂ. 665.00 ಲಕ್ಷಗಳ ಅಂದಾಜು ಮೊತ್ತದ ಈ ಕಾಮಗಾರಿಯ ಅಂದಾಜಿಗೆ ಲೆಕ್ಕ ಶಿರ್ಷಿಕೆ "4702–00–101–1–10–139 ಎ.ಐ.ಬಿ.ಪಿ ಕಾಮಗಾರಿಗಳು" ರಡಿಯಲ್ಲಿ ಹಿಂದೆ ಈ ನೀಡಿರುವ ಆಡಳಿತಾತ್ಮಕ ಅನುಮೋದನೆಯನ್ನು ಸ್ಥಿರಗೊಳಿಸಲು ಪರಿಗಣಿಸಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 96 ಮಸಾವಿ 2011(2)(ತಾಂತ್ರಿಕ)**

**ಬೆಂಗಳೂರು, ದಿನಾಂಕ: 05 ಜೂನ್ 2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಹೆರೂರು ಗ್ರಾಮದ ಹತ್ತಿರ ಸುವರ್ಣಮುಖಿ ನದಿಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಪಿಕಪ್ ನಿರ್ಮಾಣ ಕಾಮಗಾರಿಯ ರೂ. 665.00 ಲಕ್ಷ ಮೊತ್ತದ ಅಂದಾಜಿಗೆ (ರೂ. ಆರು ನೂರ ಅರವತ್ತೈದು ಲಕ್ಷಗಳು ಮಾತ್ರ) ಮೊತ್ತದ ಅಂದಾಜು ಪಟ್ಟಿಗೆ ಸರ್ಕಾರವು ಈ ಹಿಂದೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆಯನ್ನು ಸ್ಥಿರಗೊಳಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ ಲೋಇ–622–ಅಕೋ–1/11 ದಿನಾಂಕ: 20.08.2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿ.ಆರ್. 1602

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ರಾಯಚೂರು ಜಿಲ್ಲೆ, ಹಾಗೂ ತಾಲ್ಲೂಕಿನ ವಡವಟಿ–1,2,3, ಬಿಜ್ಜೇನಗೇರಾ 1,2 ಸಿದ್ರಾಮಪುರ–1, ಚಿಕ್ಕಸುಗೂರು ಗ್ರಾಮಗಳ ಹತ್ತಿರದಲ್ಲಿ ಏತ ನೀರಾವರಿ ಯೋಜನೆ ನಿರ್ಮಿಸಿ ಫಲಾನುಭವಿಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಟೆಂಡರನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ ಸನೀ(ಉ) ವಲಯ/ಬಿಜೆಪಿ/ಸ.ಇಂ–7/ಪ್ಯಾಕೇಜ್–8/2011–12/1558, ದಿನಾಂಕ: 19.03.2012.

**ಪ್ರಸ್ತಾವನೆ:**

ರಾಯಚೂರು ಜಿಲ್ಲೆ ಹಾಗೂ ತಾಲ್ಲೂಕಿನ ವಡವಟಿ–1,2,3, ಬಿಜ್ಜನಗೇರಾ 1,2 ಸಿದ್ರಾಮಪುರ–1, ಚಿಕ್ಕಸುಗೂರು ಗ್ರಾಮಗಳ ಹತ್ತಿರದಲ್ಲಿ ಏತ ನೀರಾವರಿ ಯೋಜನೆ ನಿರ್ಮಿಸಿ ಫಲಾನುಭವಿಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಆರು ಕಾಮಗಾರಿಗಳ ಒಟ್ಟು ರೂ. 35.00 ಲಕ್ಷಗಳ ಅಂದಾಜು ಪಟ್ಟಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಮಂಜೂರಾತಿ ಸಂಖ್ಯೆ 46/11–12, 43/11–12, 42/11–12, 41/11–12, 45/11–12, 44/11–12 ಮತ್ತು 58/11–12 ರಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಪ್ಯಾಕೇಜ್ ಆಧಾರದ ಮೇಲೆ ಕುಷ್ಟಗಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 28.01.2012 |
| ವಿಜಯ ಕರ್ನಾಟಕ ದಿನ ಪತ್ರಿಕೆ | 31.01.2012 |

ಇ– ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್ ಅನ್ನು ತೆರೆಯಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರ ಟೆಂಡರ್ ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 31,37,924/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ ಮೆಸರ್ಸ್ | ಟೆಂಡರ್ ನಲ್ಲಿ ಗುತ್ತಿಗೆದಾರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಕೆ. ರವೀಂದ್ರ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು | 40,94,485/– | 30.48 ಹೆಚ್ಚು |

ಮೇಲ್ಕಂಡಂತೆ ಶ್ರೀ ಕೆ. ರವೀಂದ್ರ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 30.48 ರಷ್ಟು ಹೆಚ್ಚಾಗಿರುತ್ತದೆ. ಸದರಿ

ಟೆಂಡರ್‌ನ್ನು ಸರ್ಕಾರದಲ್ಲಿ ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 12.90% ಹೆಚ್ಚಿನ ದರಗಳಿಗೆ ಅಂದರೆ ರೂ. 35,42,716/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 29 ಏನೀಯೋ 2012(ತಾಂತ್ರಿಕ),**

**ಬೆಂಗಳೂರು, ದಿನಾಂಕ: 04 ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಯಚೂರು ಜಿಲ್ಲೆ, ಹಾಗೂ ತಾಲ್ಲೂಕಿನ ವಡವಟಿ–1,2,3, ಬಿಜ್ಜನಗೇರಾ 1,2 ಸಿದ್ರಾಮಪುರ–1, ಚಿಕ್ಕಸುಗೂರು ಗ್ರಾಮಗಳ ಹತ್ತಿರದಲ್ಲಿ ಏತ ನೀರಾವರಿ ಯೋಜನೆ ನಿರ್ಮಿಸಿ ಫಲಾನುಭವಿಗಳಿಗೆ ನೀರಾವರಿ ಸೌಲಭ್ಯ ಒದಗಿಸಿರುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 31,37,924/–ಗಳ ಮೇಲೆ ಶೇ. 12.90ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 35,42,716–ಗಳಿಗೆ (ರೂ ಮೂವತ್ತೈದು ಲಕ್ಷ ನಲವತ್ತೆರಡು ಸಾವಿರದ ಏಳು ನೂರ ಹದಿನಾರು ರೂಪಾಯಿಗಳು ಮಾತ್ರ) ಶ್ರೀ ಕೆ. ರವೀಂದ್ರ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿ.ಆರ್. 1603

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಶಿಕ್ಷಣ ಸಚಿವಾಲಯ

**ವಿಷಯ:** ರಿಟ್ ಅರ್ಜಿ ಸಂಖ್ಯೆ 7935–7947/2010ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 8–2–2011ರಂದು ನೀಡಿರುವ ಆದೇಶವನ್ನು ಅನುಷ್ಠಾನಗೊಳಿಸುವ ಕುರಿತು–ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿನ ಶಿಕ್ಷಕರಿಗೆ 5ನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಅದೇಶ ಸಂಖ್ಯೆ: ಎಫ್‌ಡಿ 3 ಎಸ್‌ಆರ್‌ಪಿ 1996, ದಿನಾಂಕ 18–3–1996
2) ಸರ್ಕಾರದ ಅದೇಶ ಸಂಖ್ಯೆ: ಇಡಿ 153 ಎಸ್‌ಟಿಬಿ 1998, ದಿನಾಂಕ 2–12–1998
3) ರಿಟ್ ಅರ್ಜಿ ಸಂಖ್ಯೆ: 5377–5397/2004ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 31–3–2004ರಂದು ನೀಡಿರುವ ಆದೇಶ.
4) ಸರ್ಕಾರದ ಅದೇಶ ಸಂಖ್ಯೆ: ಇಡಿ 128 ಪಿಎಂಸಿ 2004, ದಿನಾಂಕ 1–9–2004
5) ರಿಟ್ ಅರ್ಜಿ ಸಂಖ್ಯೆ: 44103/2004ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 15–11–2007 ರಂದು ನೀಡಿರುವ ಅದೇಶ.
6) ರಿಟ್ ಅಪೀಲು ಸಂಖ್ಯೆ: 346/2008ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 6–8–2008ರಂದು ನೀಡಿರುವ ಆದೇಶ.
7) ದಿನಾಂಕ 12–11–2009ರ ಸರ್ಕಾರದ ಆದೇಶ ಸಂಖ್ಯೆ: ಇಡಿ 105 ಪಿಎಂಸಿ 2009
8) ರಿಟ್ ಅರ್ಜಿ ಸಂಖ್ಯೆ: 7935–7947/2010ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 8–2–2011ರಂದು ನೀಡಿರುವ ಆದೇಶ.
9) ನ್ಯಾಯಾಲಯ ನಿಂದನಾ ಮೊಕದ್ದಮೆ ಸಂಖ್ಯೆ: 1689–701/2011ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 4–11–2011ರಂದು ನೀಡಿರುವ ಆದೇಶ.
10) ರಿಟ್ ಅಪೀಲು ಸಂಖ್ಯೆ: 16391/2011ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 11–11–2011 ನೀಡಿರುವ ಆದೇಶ.

***

**ಪ್ರಸ್ತಾವನೆ:**

1. ಮೇಲೆ ಓದಲಾದ (1)ರ ದಿನಾಂಕ 18–3–1996ರ ಆದೇಶದಲ್ಲಿ ಈ ಕೆಳಕಂಡಂತೆ ಅದೇಶಿಸಲಾಗಿದೆ: "(1) ವಾರ್ಷಿಕ ವೇತನ ಬಡ್ತಿ ಹೊಂದಿದ ಕಾಲಿಕ ವೇತನ ಶ್ರೇಣಿಯಲ್ಲಿ ವೇತನ ಪಡೆಯುತ್ತಿರುವ ಸರ್ಕಾರಿ ನೌಕರರು ಅವರು ಪಡೆಯುತ್ತಿರುವ ವೇತನ ಶ್ರೇಣಿಯ ಗರಿಷ್ಠ

ಹಂತವನ್ನು ತಲುಪಿದ್ದರೆ ಅಥವಾ ತಲುಪಿದರೆ ಅಂತಹ ನೌಕರರಿಗೆ ಅವರು ಅಂತಿಮವಾಗಿ ಪಡೆದಿದ್ದ ವಾರ್ಷಿಕ ವೇತನ ಬಡ್ತಿಯ ದರದ ಪ್ರಮಾಣದಲ್ಲಿ ಐದು ವಾರ್ಷಿಕ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಬಹುದು"

ಈ ಮೇಲ್ಕಂಡ ಆದೇಶವನ್ನು ದಿನಾಂಕ 1–4–1996ರಿಂದ ಜಾರಿಗೆ ಬರುವಂತೆ ಹೊರಡಿಸಲಾಗಿದೆ

2. ದಿನಾಂಕ 18–3–1996ರ ಅದೇಶದ ಹಿನ್ನೆಲೆಯಲ್ಲಿ, ಅನುದಾನಿತ ಶಿಕ್ಷಣ ಸಂಸ್ಥೆಗಳ ನೌಕರರಿಗೆ ಸ್ಥಗಿತ ವೇತನ ಬಡ್ತಿಗಳನ್ನು ದಿನಾಂಕ 25–6–1998 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿ, ಮೇಲೆ ಓದಲಾದ (2)ರ ದಿನಾಂಕ 2–12–1998ರ ಆದೇಶವನ್ನು ಹೊರಡಿಸಲಾಗಿದೆ.

3. ದಿನಾಂಕ 2–12–1998ರ ಅದೇಶವನ್ನು ಪ್ರಶ್ನಿಸಿ, ಸದರಿ ಸೌಲಭ್ಯವನ್ನು ಸರ್ಕಾರಿ ನೌಕರರಿಗೆ ಮಂಜೂರು ಮಾಡಿರುವಂತೆ ದಿನಾಂಕ 1–4–1996ರಿಂದಲೇ ಜಾರಿಗೊಳಿಸಬೇಕೆಂದು ಶ್ರೀ ಐ. ರುದ್ರಯ್ಯ ಮತ್ತಿತರರು ರಿಟ್ ಅರ್ಜಿ ಸಂಖ್ಯೆ: 5377–5397/2004ನ್ನು ದಾಖಲಿಸಿದ್ದು, ಸದರಿ ರಿಟ್ ಅರ್ಜಿಯನ್ನು ದಿನಾಂಕ 31–3–1994ರಲ್ಲಿ ಈ ಕೆಳಕಂಡಂತೆ ತೀರ್ಪು ನೀಡಲಾಗಿದೆ.

"Admitted facts would reveal that the petitioner is challenging denial of the extended relief in terms of his prayers. In identical circumstances, this Court in W.P. NO. 4036-4070/2003 dated 13-3-2003 has disposed of a similar matter. The facts in this case are same/similar to those in W.P. NO. 4036-4070/2003, dated 13-3-2003.

In the given circumstances and after hearing the parties, I deem it proper to direct the petitioner to file an appropriate representation within four weeks from the date of receipt of a copy of this order. On receipt of the same, the State Government is to consider the same in accordance with law and also in the light of the Judgment of the Supreme Court in the case of Haryana State Adhyapak Sangh and others Vs. State of Haryana and others as expeditiously as possible but not later than four months from the date of receipt of a copy of the representations"

4. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ದಿನಾಂಕ 31–3–2004ರ ಆದೇಶದಂತೆ ಕ್ರಮವಹಿಸಬೇಕೆಂದು ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ 16–4–2004ರ ಮನವಿಯನ್ನು ಪರಿಗಣಿಸಿ, ಸರ್ಕಾರದ ಆದೇಶ ಸಂಖ್ಯೆ ಇಡಿ 128 ಪಿಎಂಸಿ 2004, ದಿನಾಂಕ 1–9–2004ರ ಹಿಂಬರಹವನ್ನು ನೀಡಿ, ಮನವಿದಾರರಿಗೆ ಸದರಿ ಸೌಲಭ್ಯವನ್ನು ಮಂಜೂರು ಮಾಡಲು ನಿಯಮಗಳಲ್ಲಿ ಅವಕಾಶವಿಲ್ಲವೆಂದು ತಿಳಿಸಲಾಗಿರುತ್ತದೆ.

5. ದಿನಾಂಕ 1–9–2004ರ ಹಿಂಬರಹವನ್ನು ಅರ್ಜಿದಾರರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ 44103/2004 ರಲ್ಲಿ ಪ್ರಶ್ನಿಸಿದ್ದು ಸದರಿ ರಿಟ್ ಅರ್ಜಿಯಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 15–11–2007ರಲ್ಲಿ ದಿನಾಂಕ 1–9–2004ರ ಹಿಂಬರಹವನ್ನು ರದ್ದುಗೊಳಿಸಿ, ಅರ್ಜಿದಾರರ ಮನವಿಯನ್ನು ಮತ್ತೊಮ್ಮೆ ಪರಿಗಣಿಸಿ, ನಿಯಮದನ್ವಯ ಕ್ರಮ ಜರುಗಿಸುವಂತೆ ಆದೇಶ ನೀಡಿರುತ್ತದೆ.

6. ದಿನಾಂಕ 15–11–2007ರ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶವನ್ನು ಸರ್ಕಾರವು ರಿಟ್ ಅಪೀಲು ಸಂಖ್ಯೆ 346/2008ರಲ್ಲಿ ಪ್ರಶ್ನಿಸಿದ್ದು, ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 6–8–2008ರಂದು ಈ ಕೆಳಕಂಡಂತೆ ಇತ್ಯರ್ಥಗೊಳಿಸಿದೆ:

"5. In view of this, we deem it fit and proper to issue certain clarifications without disturbing the final order of remand passed by the learned Single Judge.

The authority concerned would decide the matter in accordance with law but without being influenced by any of the observations made by the learned Single Judge while disposing of the respondents' Writ Petition. Needless to state the authority concerned would however decide the issue after taking into consideration the various decisions touching the issue pronounced by this Court, other High Courts and the Supreme Court including the judgments referred to by the learned Single Judge.

With the above clarification, this appeal stands disposed of"

7. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅಪೀಲಿನಲ್ಲಿ ದಿನಾಂಕ 6–8–2008ರಂದು ನೀಡಿದ ತೀರ್ಪಿನಂತೆ, ಸಂಬಂಧಿಸಿದ ಮನವಿದಾರರ ಕೋರಿಕೆಯನ್ನು ನಿಯಮಾನ್ವಯ ಪರಿಗಣಿಸಲು ಅವಕಾಶವಿಲ್ಲವೆಂಬ ಸಕಾರಣಗಳನ್ನು ನಮೂದಿಸಿ ಸರ್ಕಾರದ ಆದೇಶ ಸಂಖ್ಯೆ ಇಡಿ 105 ಪಿಎಂಸಿ 2009, ದಿನಾಂಕ 12–11–2009ರಲ್ಲಿ ಇತ್ಯರ್ಥಗೊಳಿಸಲಾಗಿರುತ್ತದೆ.

8. ದಿನಾಂಕ 12–11–2009ರ ಆದೇಶವನ್ನು ಪ್ರಶ್ನಿಸಿ ಅರ್ಜಿದಾರರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ 7935–7947/2010ನ್ನು ದಾಖಲಿಸಿರುತ್ತಾರೆ. ಸದರಿ ರಿಟ್ ಅರ್ಜಿಯನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ ದಿನಾಂಕ 8–2–2011 ರಂದು ಈ ಕೆಳಕಂಡಂತೆ ಇತ್ಯರ್ಥಗೊಳಿಸಿರುತ್ತದೆ:–

"Accordingly, writ petitions are disposed of with a direction to the respondents to grant five increments to the petitioners herein w.e.f. 1-4-1996. Respondents shall comply with this order within three months from the date of receipt of this order."

9. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 7935–7947/2011ರಲ್ಲಿ ದಿನಾಂಕ 8–2–2011ರಂದು ನೀಡಿರುವ ತೀರ್ಪನ್ನು ನಿಗದಿತ ಸಮಯದೊಳಗೆ ಅನುಷ್ಠಾನಗೊಳಿಸಿಲ್ಲವೆಂದು ಬಾಧಿತ ಅರ್ಜಿದಾರರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ನ್ಯಾಯಾಲಯ ನಿಂದನಾ ಮೊಕದ್ದಮೆ ಸಂಖ್ಯೆ 1689–1701/2011ನ್ನು ದಾಖಲಿಸಿದ್ದು, ಸದರಿ ನ್ಯಾಯಾಲಯ ನಿಂದನಾ ಮೊಕದ್ದಮೆಯಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 4–11–2011 ರಂದು ಈ ಕೆಳಕಂಡಂತೆ ತೀರ್ಪು ನೀಡಿರುತ್ತದೆ:–

"It is not in dispute that the appeal filed against the order of disobedience of which is complained of was heard in full yesterday and reserved for judgment.

2. In that view of the matter, this contempt petition has become infructuous. As we have to await the decision of the Appellate Court, the contempt petitions are dismissed reserving liberty to the complainant to approach this Court, if, even after succeeding in the writ appeal, the order passed by the Writ appellate Court is disobeyed"

10. ರಿಟ್ ಅರ್ಜಿ ಸಂಖ್ಯೆ: 7935–7947/2010ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 8–2–2011ರಂದು ನೀಡಿರುವ ಆದೇಶವನ್ನು ಪ್ರಶ್ನಿಸಿ, ರಾಜ್ಯ ಸರ್ಕಾರ ರಿಟ್ ಅಪೀಲು ಸಂಖ್ಯೆ 16391/2011 ಮತ್ತು 16988–16999/2011ನ್ನು ದಾಖಲಿಸಿದ್ದು, ಸದರಿ ಪ್ರಕರಣದಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 11–11–2011 ರಂದು ಈ ಕೆಳಕಂಡಂತೆ ತೀರ್ಪು ನೀಡಿರುತ್ತದೆ:–

"The appeals are accordingly dismissed. We are compelled to emphasize that in the impugned judgement, compliance was ordered to be made within three months. In view of the dismissal of writ appeals. IA 2/2011, IA.3/2011 and IA.4/2011 do not survive for consideration."

11. ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದಿಂದ ಸಲ್ಲಿಸಿದ್ದ ರಿಟ್ ಅಪೀಲು ಸಂಖ್ಯೆ: 16391/2011 ಮತ್ತು ರಿಟ್ ಅಪೀಲು ಸಂಖ್ಯೆ: 16988–16999/2011ನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ವಜಾಗೊಳಿಸಿರುವುದರಿಂದ ಸರ್ಕಾರವು ರಿಟ್ ಅರ್ಜಿ ಸಂಖ್ಯೆ: 7935–7947/2010ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 8–2–2011 ರಂದು ನೀಡಿರುವ ಆದೇಶವನ್ನು ಅನುಷ್ಠಾನಗೊಳಿಸಲು ಉದ್ದೇಶಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಡಿ 99 ಪಿಎಂಸಿ 2011, ಬೆಂಗಳೂರು, ದಿನಾಂಕ 06–06–2012**

12. ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ, ರಿಟ್ ಅರ್ಜಿ ಸಂಖ್ಯೆ: 7935–7947/2010ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 8–2–2011ರಂದು ನೀಡಿರುವ ಆದೇಶವನ್ನು ಅನುಷ್ಠಾನಗೊಳಿಸಿ ಐದು ಸ್ಥಗಿತ ವೇತನ ಬಡ್ತಿ ಸೌಲಭ್ಯವನ್ನು ಸರ್ಕಾರಿ ನೌಕರರಿಗೆ ದಿನಾಂಕ 1–4–1996 ರಿಂದ ಮಂಜೂರು ಮಾಡಿರುವಂತೆ ಅನುದಾನಿತ ಶಿಕ್ಷಣ ಸಂಸ್ಥೆಗಳ ನೌಕರರಿಗೂ ಸಹ ದಿನಾಂಕ 1–4–1996 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿದೆ.

13. ಈ ಆದೇಶವನ್ನು ಕಾನೂನು ಇಲಾಖೆಯ ದಿನಾಂಕ 3–3–2012ರ ಟಿಪ್ಪಣಿಯನ್ವಯ ನೀಡಿರುವ ಸಹಮತಿಯಂತೆ ಮತ್ತು ಆರ್ಥಿಕ ಇಲಾಖೆಯ ದಿನಾಂಕ 19–5–2012ರ ಟಿಪ್ಪಣಿ ಸಂಖ್ಯೆ: ಆಇ 1109 ವೆಚ್ಚ–8/2012ರನ್ವಯ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಪ್ರಭುಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1632 ಶಿಕ್ಷಣ ಇಲಾಖೆ (ಪ್ರಾಥಮಿಕ)

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub:** Constitution of Karnataka ICT Group (KIG) 2020

**Preamble:**

Karnataka State has been a leader in the ICT space for over two decades. The ICT sector has placed Bangalore on the global technology map so much so that IT capital of India is the 2nd best technology hub in the world. The State has seen a double digit growth for over a decade in the ICT sector, being home to over 2200 ICT companies, contributing to over 24 billion USD of exports (Rs. 1,35,000 Crores) and providing direct employment to over 8 lakh professionals.

Globally, the ICT market is becoming highly competitive. The State needs to take urgent strategic initiatives to maintain its leadership position in the ICT sector. There is tremendous scope for increasing State's share in the global ICT market as well as capturing a major share in the domestic market. Industry experts have predicted 15% growth p.a. for the ICT industry. Government ICT spend during the year 2009 was about Rs. 15,000 Crores. There is over Rs. 50,000 Crores of business opportunities in e-Governance itself. There is a great level of need for IP Driven Technology companies who can develop IP/Technologies/Products for the Large growing Indian Market. In the circumstances, it is necessary to take proactive steps to ensure a healthy growth rate for ICT in Karnataka State.

It is proposed to set up a Karnataka ICT Group (KIG) 2020, with the Vision and Mission of Maintaining the growth of ICT in Karnataka. The KIG will suggest necessary policy initiatives to be taken by the State Government to achieve the objectives. Hence the order:

**Government Order No. ITD 05 PRM 2012, dated 05-06-2012**

In the circumstances explained above, Government is pleased to constitute Karnataka ICT Group 2020, with the following composition:-

| | | | |
|---|---|---|---|
| 1) | Shri T. V. Mohandas Pai,<br>Chairman, Manipal Global Education Services Pvt. Ltd., | … | Chairman |
| 2) | Shri B. V. Naidu,<br>Chairman & CEO, Sagitaur Ventures India Pvt. Ltd., | … | Vice-Chairman |
| 3) | Prof. Sadagopan,<br>Director, IIIT, Bangalore | … | Member |
| 4) | Shri Sudip Banerjee<br>Director, IIIT, Bangalore | … | Member |
| 5) | Shri Sanjay Nayak,<br>CEO & MD, Tejas Networks Ltd., | … | Member |
| 6) | Director, Nasscom-Bangalore | … | Member |
| 7) | Chairman, India Semiconductor Association (ISA) | … | Member |
| 8) | President, TiE-Bangalore | … | Member |

The Karnataka ICT Group 2020 will work towards achieving the following Goals:-

i) Increasing the ICT revenues from the present Rs. 1.35 lakh Crores to Rs. 4 lakh Crores by 2020.

ii) Increasing the employment in ICT from the present 8 lkhs to 20 lakhs by 2020

iii) Create/help incubate 1000 start-ups/entrepreneur-driven companies by 2020

The Karnataka ICT Group 2020 will have the following **strategies** and suggest initiatives accordingly:-

i) Make Bangalore the global city of choice in ICT

ii) Make Mangalore, Mysore, Hubli-Dharwad, Gulbarga and Belgaum, the 'National Centres of ICT'.

iii) Suggest policy initiatives to promote entrepreneurship in the five 'National Centres of ICT'

iv) Promote start-ups across the State by setting up Incubation facilities in the five 'National Centres of ICT'

v) Set up partnership with Singapore, Japan, Australia, France, Taiwan and Germany to accelerate business co-operation and entrepreneurship.

vi) Create Centres of Excellence in major universities across the State

vii) Setting up a Start-ups Angel Fund

The Department of IT, BT and S & T, shall provide all the necessary assistance and support required by the Karnataka ICT Group (KIG) 2020 to achieve the objectives. The Department shall make necessary budgetary provisions for implementing the initiatives recommended by the Group.

By Order and in the name of the Governor of Karnataka

**S. Ruju**

Deputy Secretary to Government

Information Technology, Biotechnology and

Science and Technology Department

P.R. 1633

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ॥ ಲಕ್ಷ್ಮಣ್, ತಜ್ಞ ವೈದ್ಯರು, ಸಾರ್ವಜನಿಕ ಆಸ್ಪತ್ರೆ, ಪಾವಗಡ, ತುಮಕೂರು ಜಿಲ್ಲೆ ಇವರ ಅನಧಿಕೃತ ಗೈರು ಹಾಜರಿ ವಿರುದ್ಧ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವ ಬಗ್ಗೆ ಆದೇಶ.–

**ಓದಲಾಗಿದೆ:**

1) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ದೋಷಾರೋಪಣಾ ಪಟ್ಟಿ ಸಂಖ್ಯೆ: ಡಿಪಿಜಿ/ಬೆಂವಿII/ಗ್ರಾ/60/08–09, ದಿನಾಂಕ 28–04–2009.

2) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಪಿಜಿ/ಬೆಂವಿII/ ತುಮಕೂರು/60/2008–09, ದಿನಾಂಕ 18–07–2009.

3) ವಿಚಾರಣಾ ವರದಿ ದಿನಾಂಕ 18–10–2010

4) ಮರು ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಜಿ/ಬೆಂವಿII/ತುಮಕೂರು/60/2008–09, ದಿನಾಂಕ 10–03–2011

5) ಮುಖ್ಯ ಜಾಗೃತಾಧಿಕಾರಿ (ಜಾಗೃತ ಕೋಶ) ಆಕುಕ ಸೇವೆಗಳು, ಬೆಂಗಳೂರು ಇವರ ವಿಚಾರಣಾ ವರದಿ ಸಂಖ್ಯೆ: ಮು.ಜಾ.ಅ./ಜಾಕೋ/22/2010, ದಿನಾಂಕ 24–11–2011.

6) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಜಿ/ಬೆಂವಿII/ ತುಮಕೂರು/60/2008–09, ದಿನಾಂಕ 26–12–2011.
7) ಡಾ॥ ಲಕ್ಷ್ಮಣ್ ಇವರ ಸಮಜಾಯಿಷಿ ದಿನಾಂಕ 23–03–2012
8) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಜಿ/ಬೆಂವಿII/ ತುಮಕೂರು/ 60/2008–09, ದಿನಾಂಕ 03–05–2012.

**ಪ್ರಸ್ತಾವನೆ:**

ಡಾ॥ ಲಕ್ಷ್ಮಣ್, ತಜ್ಞ ವೈದ್ಯರು, ಸಾರ್ವಜನಿಕ ಆಸ್ಪತ್ರೆ, ಪಾವಗಡ, ತುಮಕೂರು ಜಿಲ್ಲೆ ಇವರು ದಿನಾಂಕ 18–04–2008 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾದ ಆರೋಪಕ್ಕೆ ಸಂಬಂಧಿಸಿದಂತೆ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಕಾರಣ ಕೇಳುವ ನೋಟೀಸನ್ನು ದೋಷಾರೋಪಣೆ ಪಟ್ಟಿಯೊಂದಿಗೆ ಆರೋಪಿತ ವೈದ್ಯರಿಗೆ ಜಾರಿ ಮಾಡಿ ಅವರಿಂದ ರಕ್ಷಣಾ ಹೇಳಿಕೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ಸದರಿ ನೋಟೀಸ್‌ಗೆ ಆಪಾದಿತ ವೈದ್ಯರು ತಮ್ಮ ರಕ್ಷಣಾ ಹೇಳಿಕೆಯನ್ನು ಸಲಿಸಿಲ್ಲವಾದ್ದರಿಂದ ಅವರ ವಿರುದ್ಧದ ಆರೋಪದ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯಲು ಈ ಪ್ರಕರಣವನ್ನು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಇಲಾಖಾ ವಿಚಾರಣೆಗೆ ವಹಿಸಲು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ತೀರ್ಮಾನಿಸಿ ಅದರಂತೆ ನಿವೃತ್ತ ನ್ಯಾಯಾಧೀಶರಾದ ಶ್ರೀ ಇಂದೂಧರ್ ಸೋಸಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ವಿಚಾರಣಾಧಿಕಾರಿಯವರು ನಿಯಮಾನುಸಾರ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಆಯುಕ್ತರಿಗೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ಆಪಾದಿತ ಅಧಿಕಾರಿಯವರು ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಿಯಾಗಿರುವುದು ಸಾಬೀತಾಗಿರುವುದಿಲ್ಲವೆಂದು ವರದಿಯನ್ನು ನೀಡಿದ್ದು, ಶಿಸ್ತು ಪ್ರಾಧಿಕಾರವು ವರದಿಯನ್ನು ಪರಿಶೀಲಿಸಿದ ನಂತರ ಮರು ವಿಚಾರಣೆಗೆ ವಹಿಸಲು ನಿರ್ಧರಿಸಿ ಸದರಿಯವರ ವಿಚಾರಣಾ ವರದಿಯನ್ನು ತಿರಸ್ಕರಿಸಿ ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ಮುಖ್ಯ ಜಾಗೃತಾಧಿಕರಿ (ಜಾಗೃತ ಕೋಶ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಮೇಲೆ (5)ರಲ್ಲಿ ಓದಲಾದ ವಿಚಾರಣಾಧಿಕಾರಿ ಮುಖ್ಯ ಜಾಗೃತಾಧಿಕಾರಿ (ಜಾಗೃತ ಕೋಶ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ನಿಯಮಾನುಸಾರ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಆಯುಕ್ತರಿಗೆ ಸಲಿಸಿದ್ದು, ಈ ವಿಚಾರಣಾ ವರದಿಯಲ್ಲಿ ಡಾ॥ ಲಕ್ಷ್ಮಣ್, ತಜ್ಞ ವೈದ್ಯರು ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದು ವಿಚಾರಣೆಯಲ್ಲಿ ಸಂಪೂರ್ಣವಾಗಿ ಸಾಬೀತಾಗಿದೆ ಎಂದು ನಿರ್ಣಯ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರುರವರು ಆಪಾದಿತ ವೈದ್ಯರಿಗೆ ತಿಳುವಳಿಕೆಯ ಪತ್ರ ಜಾರಿ ಮಾಡಿ ಈ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ವಿವರಣೆ ಸಲ್ಲಿಸುವಂತೆ ಸೂಚಿಸಿರುತ್ತಾರೆ.

ಮೇಲೆ (7)ರಲ್ಲಿ ಓದಲಾದ ಪತ್ರದಲ್ಲಿ ಡಾ॥ ಲಕ್ಷ್ಮಣ್, ತಜ್ಞ ವೈದ್ಯರು ಸಮಜಾಯಿಷಿ ಸಲ್ಲಿಸಿದ್ದು, ವಿಚಾರಣಾಧಿಕಾರಿಗಳೂ ತಮ್ಮ ಮನವಿ ಪರಿಗಣಿಸದೆ ಏಕಪಕ್ಷೀಯವಾಗಿ ತೀರ್ಮಾನ ಕೈಗೊಂಡು ಮರು ವಿಚಾರಣಾ ವರದಿ ಸಲ್ಲಿಸಿದ್ದು, ವಿಚಾರಣಾಧಿಕಾರಿಗಳ ನೇಮಕವೇ ಅಸಿಂಧುವಾಗಿದ್ದು, ಸದರಿ ವರದಿ ರದ್ದುಪಡಿಸಿ ಆರೋಪದಿಂದ ಕೈ ಬಿಟ್ಟು ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ಕೋರಿರುತ್ತಾರೆ ಹಾಗೂ ಈ ದಿನದಿಂದ ಜಾರಿಗೆ ಬರುವಂತೆ ರಾಜೀನಾಮೆ ಅಂಗೀಕರಿಸಿ ಸೇವೆಯಿಂದ ವಿಮುಕ್ತಗೊಳಿಸಬೇಕೆಂದು ಕೋರಿರುತ್ತಾರೆ.

ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧ ಅನಧಿಕೃತ ಗೈರು ಹಾಜರಿ ಆರೋಪವು ಸಾಬೀತಾಗಿರುವುದರಿಂದ ದಿನಾಂಕ 18–04–2008ರಿಂದಲೇ ಅನ್ವಯವಾಗುವಂತೆ ಇವರ ರಾಜೀನಾಮೆ ಅಂಗೀಕರಿಸಲು ಮೇಲೆ (8)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿ, ಆಯುಕ್ತರ ಪ್ರಸ್ತಾವೆಯನ್ನು ಸಂಬಂಧಿಸಿರುವ ದಾಖಲಾತಿಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದೆ. ಡಾ॥ ಲಕ್ಷ್ಮಣ್, ತಜ್ಞ ವೈದ್ಯರು ಸಾರ್ವಜನಿಕ ಆಸ್ಪತ್ರೆ, ಪಾವಗಡ, ತುಮಕೂರು ಜಿಲ್ಲೆ ಇವರು ಕಾರಣ ನೀಡದೆ ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೆ ವಿಚಾರಣೆಗೂ ಹಾಜರಾಗದೆ ದಿನಾಂಕ 18–04–2008 ರಿಂದ ಈವರೆವಿಗೂ ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಿಯಾಗಿರುವುದು ಇಲಾಖಾ ವಿಚಾರಣೆಯಿಂದ ರುಜುವಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾಳಿಗಳೂ 1957ರ ನಿಯಮ 8(vii) ರನ್ವಯ ಸದರಿ ವೈದ್ಯರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 173 ಎಂಎಸ್ಎ 2012, ಬೆಂಗಳೂರು, ದಿನಾಂಕ 29–05–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಡಾ॥ ಲಕ್ಷ್ಮಣ್, ತಜ್ಞ ವೈದ್ಯರು, ಸಾರ್ವಜನಿಕ ಆಸ್ಪತ್ರೆ, ಪವಗಡ ತಾ॥ ತುಮಕೂರು ಜಿಲ್ಲೆ ಇವರನ್ನು ಅನಧಿಕೃತ ಗೈರು ಹಾಜರಿ ಆರೋಪದ ಮೇರೆಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(viii) ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಎಫ್. ಹುಬ್ಬಳ್ಳಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1634 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ:** ಎನ್‌ಸಿಎಫ್ 2005 ಆಧಾರಿತ ಸಿದ್ಧವಾಗುತ್ತಿರುವ 1 ರಿಂದ 4,6,7,9 ಮತ್ತು 10ನೇ ತರಗತಿಗಳ ನೂತನ ಪಠ್ಯಪುಸ್ತಕಗಳನ್ನು ಹೊರತರುವ ಬಗ್ಗೆ.–

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು ರವರ ಪತ್ರ ಸಂಖ್ಯೆ: ಪಪುರನ ಆದೇಶ2/ಪಪಪಪುರ/ಕ.ಪ.ಪು.ಸಂ./2011–12, ದಿನಾಂಕ 03–03–2012.

**ಪ್ರಸ್ತಾವನೆ:**

1. ಮೇಲೆ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಪಠ್ಯಪುಸ್ತಕ ಸಂಘ ಬೆಂಗಳೂರು ರವರು, ಎನ್‌ಸಿಎಫ್ 2005 ಆಧಾರಿತ ಸಿದ್ಧವಾಗಿರುವ ನೂತನ ಪಠ್ಯವಸ್ತುವಿನ ಆಧಾರದ ಮೇಲೆ ನೂತನ ಪಠ್ಯಪುಸ್ತಕಗಳ ರಚನಾ ಕಾರ್ಯವು ನಡೆಯುತ್ತಿದೆ. 1,2,3,4,5 ಮತ್ತು 8ನೇ ತರಗತಿಗಳ ಹೊಸ ಪಠ್ಯಪುಸ್ತಕಗಳನ್ನು 2012–13ನೇ ಸಾಲಿನಲ್ಲಿ ಮತ್ತು 2013–14ನೇ ಸಾಲಿನಲ್ಲಿ 6,7,9 ಮತ್ತು 10 ತರಗತಿಗಳ ಪಠ್ಯಪುಸ್ತಕಗಳನ್ನು ಜಾರಿಗೆ ತರಲು ಸರ್ಕಾರಿ ಆದೇಶವನ್ನು ಹೊರಡಿಸಿ ಎಂದು ತಿಳಿಸಿ 6,7,9 ಮತ್ತು 10ನೇ ತರಗತಿಗಳ ಪಠ್ಯಪುಸ್ತಕಗಳು 13–14ನೇ ಸಾಲಿಗೆ ಒಟ್ಟಿಗೆ ಜಾರಿಗೊಳ್ಳಬೇಕಾಗಿರುವುದರಿಂದ ಇವುಗಳ ರಚನಾ ಕಾರ್ಯ ಪ್ರಾರಂಭಗೊಂಡಿದೆ. ಆದರೆ 7 ಮತ್ತು 10ನೇ ತರಗತಿಗಳು ವಿದ್ಯಾರ್ಥಿಯ ಜೀವನದಲ್ಲಿ ಪ್ರಮುಖ ಹಾಗೂ ನಿರ್ಣಾಯಕ ಘಟ್ಟಗಳಾಗಿರುವುದರಿಂದ ಹಿಂದಿನ ಎಲ್ಲಾ ತರಗತಿಗಳನ್ನು ಹಳೆಯ ಪಠ್ಯವಸ್ತುವಿನ ಆಧಾರದ ಮೇಲೆ ಓದಿ ಮೊದಲ ಬಾರಿಗೆ ಹೊಸ ವಿಧಾನಗಳನ್ನು ಅಳವಡಿಸಿರುವ ನೂತನ ಪಠ್ಯವಸ್ತುವನ್ನು ಆಧರಿಸಿ ಇರುವ ಪಠ್ಯಪುಸ್ತಕಗಳನ್ನು ಅರ್ಥೈಸುವುದು ವಿದ್ಯಾರ್ಥಿಗೆ ಕಷ್ಟಕರವಾಗಿರುವುದೆಂದು ತಿಳಿಸಿರುವ ಹಿನ್ನೆಲೆಯಲ್ಲಿ 2013–14 ಸಾಲಿಗೆ 1,2,3,4,6,7,9 ಮತ್ತು 10 ತರಗತಿಗಳ ಪಠ್ಯಪುಸ್ತಕಗಳನ್ನು ಒಟ್ಟಿಗೆ ಅಳವಡಿಸುವ ಬದಲು 2013–14ನೇ ಸಾಲಿಗೆ 1,2,6 ಮತ್ತು 9 ಹಾಗೂ 2014–15ನೇ ಸಾಲಿಗೆ 3,4,7 ಮತ್ತು 10ನೇ ತರಗತಿಗಳ ಪಠ್ಯಪುಸ್ತಕಗಳನ್ನು ಅಳವಡಿಸುವುದರಿಂದ ವಿದ್ಯಾರ್ಥಿಯ ಕಲಿಕೆಗೆ ಅನುಕೂಲವಾಗುವ ಸುರಳಿ ಆಕಾರದ ವಿಧಾನವನ್ನು ಅನುಸರಿಸಬಹುದು, ಈ ಸಂಬಂಧ ಸರ್ಕಾರಿ ಆದೇಶ ಹೊರಡಿಸಲು ಕೋರಿರುತ್ತಾರೆ.
2. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ

**ಸರ್ಕಾರದ ಆದೇಶ ಸಂಖ್ಯೆ: ಇಡಿ 11 ಯೋಯೋಕ 2012, ಬೆಂಗಳೂರು, ದಿನಾಂಕ 08–06–2012**

3. 2013–14ನೇ ಸಾಲಿಗೆ 1,2,6,9ನೇ ತರಗತಿಗಳಿಗೆ ಹಾಗೂ 2014–15ನೇ ಸಾಲಿಗೆ 3,4,7,10ನೇ ತರಗತಿಗಳಿಗೆ ಎನ್‌ಸಿಎಫ್ 2005 ಆಧಾರಿತ ಸಿದ್ಧಪಡಿಸಿದ ಹೊಸ ಪಠ್ಯ ಪುಸ್ತಕ ಅಳವಡಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ. ಇದಕ್ಕೆ ಬೇಕಾಗಿರುವ ಪೂರ್ವ ಸಿದ್ಧತೆಯನ್ನು ಮಾಡಿಕೊಳ್ಳಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಎಫ್. ಮಾಗಿ**

ಪಿ.ಆರ್. 1635

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕಿನ ಕಾಮಗಾರಿಗಳನ್ನು ಲೆಕ್ಕ ಶೀರ್ಷಿಕೆ 4702 ಪ್ರಧಾನ ಕಾಮಗಾರಿಗಳು ಲೆಕ್ಕ ಶೀರ್ಷಿಕೆ ಅಡಿ ಕೈಗೊಳ್ಳಲು ಅನುಮೋದಿಸುವ ಬಗ್ಗೆ.

**ಓದಲಾಗಿದೆ :** ದಿನಾಂಕ: 18–04–2012ರ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: PWD 273 FC-1:2012

**ಪ್ರಸ್ತಾವನೆ :**

ತುಮಕೂರು ಜಿಲ್ಲೆ, ಪಾವಗಡ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಕೆರೆಗಳ ಅಭಿವೃದ್ಧಿ, ಹೊಸ ಕೆರೆ ನಿರ್ಮಾಣ ಮತ್ತು ಅಣೆಕಟ್ಟು ಮತ್ತು ಪಿಕಪ್ ಕಾಮಗಾರಿಗಳನ್ನು ತುರ್ತಾಗಿ ಕೈಗೊಂಡು ಅಭಿವೃದ್ಧಿಪಡಿಸುವುದು ಅವಶ್ಯಕವಾಗಿರುತ್ತದೆಂದು, ಸದರಿ ಕಾಮಗಾರಿಗಳಿಗಾಗಿ ಹೆಚ್ಚುವರಿ ಅನುದಾನ ಬಿಡುಗಡೆಗೆ ಆರ್ಥಿಕ ಇಲಾಖೆಗೆ ಪ್ರಸ್ತಾವನೆಯನ್ನು ಕಳುಹಿಸಲಾಯಿತು. ಇದರಂತೆ ರೂ. 600.00 ಲಕ್ಷ ಅಂದಾಜು ಮೊತ್ತದಲ್ಲಿ ಅನುಬಂದದಲ್ಲಿ ತಿಳಿಸಿರುವ 46 ಕಾಮಗಾರಿಗಳನ್ನು ಪ್ರಸ್ತಾಪಿಸಲಾಗಿದೆ. ಈ ಕಾಮಗಾರಿಗಳನ್ನು ಕೈಗೊಳ್ಳಲು, ಹೆಚ್ಚುವರಿಯಾಗಿ ಅಂದಾಜು ಮೊತ್ತದ 1/3 ಭಾಗದಷ್ಟು ಅನುದಾನವನ್ನು ಒದಗಿಸಲು ಆರ್ಥಿಕ ಇಲಾಖೆಯು ಸಹಮತಿಸಿರುತ್ತದೆ.

ಕಾರಣ ಈ ಕಾಮಗಾರಿಗಳನ್ನು 4702–ಪ್ರಧಾನ ಕಾಮಗಾರಿಗಳು ಲೆಕ್ಕ ಶೀರ್ಷಿಕೆ ಅಡಿ ಕೈಗೊಳ್ಳಲು ಅನುಮೋದಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 13 ಮಸಾವಿ 2012 (ಭಾಗ–1), ಬೆಂಗಳೂರು, ದಿನಾಂಕ: 10ನೇ ಮೇ 2012**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ತುಮಕೂರು ಜಿಲ್ಲೆಯ ಪಾವಗಡ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಅನುಬಂಧದಲ್ಲಿ ತಿಳಿಸಿರುವ 46 ಕಾಮಗಾರಿಗಳನ್ನು 4702 ಪ್ರಧಾನ ಕಾಮಗಾರಿಗಳು ಲೆಕ್ಕ ಶೀರ್ಷಿಕೆ ಅಡಿ ರೂ. 600.00ಲಕ್ಷಗಳು (ರೂಪಾಯಿ ಆರು ನೂರು ಲಕ್ಷಗಳು ಮಾತ್ರ) ಅಂದಾಜು ಮೊತ್ತದಲ್ಲಿ, ಪ್ರತಿ ಕಾಮಗಾರಿಯ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ 4702 ಪ್ರಧಾನ ಕಾಮಗಾರಿಗಳು ಲೆಕ್ಕ ಶೀರ್ಷಿಕೆ ಸೂಕ್ತ ಉಪ ಶೀರ್ಷಿಕೆ ಅಡಿ ಮಂಜೂರಾತಿ ಪಡೆದು ಕೈಗೊಳ್ಳಲು ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: PWD 273 FC-I:2012 ದಿನಾಂಕ: 18–04–2012 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1511 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಸರ್ಕಾರದ ಆದೇಶ ಸಂಖ್ಯೆ: ಸನೀಇ 13 ಮಸಾವಿ 2012 (ಭಾಗ–1),**

**ಬೆಂಗಳೂರು, ದಿನಾಂಕ: 10ನೇ ಮೇ 2012 ಕ್ಕೆ ಅನುಬಂಧ**

| ಕ್ರ.ಸಂ. | ಕಾಮಗಾರಿಯ ವಿವರ | ಅಂದಾಜು ಮೊತ್ತ (ಲಕ್ಷ ರೂ.ಗಳಲ್ಲಿ) |
|---|---|---|
| 1. | ತಿರುಮಣಿ ಕೆರೆ ಹೂಳೆತ್ತುವ ಕಾಮಗಾರಿ | 10.00 |
| 2. | ರಾಯಚರ್ಲು ಕೆರೆ ಹೂಳೆತ್ತುವ ಕಾಮಗಾರಿ | 10.00 |
| 3. | ವಳ್ಳೂರು ಕೆರೆ ಹೂಳೆತ್ತುವ ಕಾಮಗಾರಿ | 10.00 |
| 4. | ಕ್ಯಾತಗಾನಚೆರ್ಲು ಕೆರೆ ಹೂಳೆತ್ತುವ ಕಾಮಗಾರಿ | 5.00 |
| 5. | ಹುಸೇನಪುರ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 6. | ನಾಗಲಮಡಿಕೆರೆ ಹೂಳೆತ್ತುವ ಕಾಮಗಾರಿ | 5.00 |
| 7. | ದೊಮ್ಮತಮರಿ ಕೆರೆ ಹೂಳೆತ್ತುವ ಕಾಮಗಾರಿ | 10.00 |
| 8. | ವಿರುಪಸಮುದ್ರ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 9. | ಗುಮ್ಮಘಟ್ಟ ಕೆರೆ ಹೂಳೆತ್ತುವ ಕಾಮಗಾರಿ | 10.00 |
| 10. | ಕನ್ನಮೇಡಿ ಕೆರೆ ಹೂಳೆತ್ತುವ ಕಾಮಗಾರಿ | 10.00 |
| 11. | ಕೋಟಗುಡ್ಡಕೆರೆ ಹೂಳೆತ್ತುವ ಕಾಮಗಾರಿ | 5.00 |
| 12. | ಪೊನ್ನಸಮುದ್ರ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 13. | ಯರ್ರಮ್ಮನಹಳ್ಳಿ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 14. | ತಿಪ್ಪಯ್ಯನದುರ್ಗ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 15. | ಜೆ. ಅಚ್ಚಮ್ಮನಹಳ್ಳಿ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 16. | ನಾಗಲಪುರ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 17. | ಭೀಮನಕುಂಟೆ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 18. | ಕತ್ತಿಕ್ಯಾತನಹಳ್ಳಿ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 19. | ರಾಜವಂತಿ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 20. | ಕೆ.ಟಿ. ಹಳ್ಳಿ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 21. | ಗುಂಡ್ಲಹಳ್ಳಿ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 22. | ದವಡಬೆಟ್ಟ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 23. | ಪಳವಳ್ಳಿ ಸಣ್ಣ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 24. | ಪಾವಗಡ ಅಗಸರಕುಂಟೆ ಕೆರೆ ಹೂಳೆತ್ತುವ ಕಾಮಗಾರಿ | 10.00 |
| 25. | ಓಬಳಾಪುರ ಹೊಸಕೆರೆ ಹಳ್ಳಕ್ಕೆ ಪಿಕಪ್ ನಿರ್ಮಾಣ | 20.00 |
| 26. | ಕರೇಕ್ಯಾತನಹಳ್ಳಿ ಸ್ವಾರಮ್ಮನ ಕೆರೆಗೆ ಹೂಳೆತ್ತುವ ಕಾಮಗಾರಿ | 50.00 |
| 27. | ಮರಿದಾಸನಹಳ್ಳಿ ಹತ್ತಿರ ಹೊಸಕೆರೆ ಫೀಡರ್ ಚಾನೆಲ್‌ಗೆ ಪಿಕಪ್ ನಿರ್ಮಾಣ | 5.00 |
| 28. | ಅನ್ನದಾನಪುರ ಕೆರೆ ಹೂಳೆತ್ತುವ ಕಾಮಗಾರಿ | 5.00 |
| 29. | ದೊಡ್ಡಹಳ್ಳಿ ಹತ್ತಿರ ಪಿಕಪ್ ನಿರ್ಮಾಣ | 5.00 |
| 30. | ವೈ.ಎನ್. ಹೊಸಕೋಟೆ ಹತ್ತಿರ ಉದ್ದಣ್ಣಪ್ಪನಕುಂಟೆ ಹೂಳು ತೆಗೆಯುವುದು | 5.00 |
| 31. | ಮೇಡಿಹಳ್ಳಿ ಗ್ರಾಮದ ಹತ್ತಿರ ಬರುವ ಹಳ್ಳಕ್ಕೆ ಅಡ್ಡಲಾಗಿ ಚೆಕ್ ಡ್ಯಾಂ ನಿರ್ಮಾಣ | 30.00 |
| 32. | ಶೈಲಾಪುರ ಗ್ರಾಮದ ದೊಡ್ಡ ಬೆಟ್ಟದ ಹತ್ತಿರ ಇಂಗುಕೆರೆ ನಿರ್ಮಿಸಿ ಶೈಲಾಪುರ ಕೆರೆ ಫೀಡರ್ ಚಾನಲ್ ನಿರ್ಮಾಣ | 30.00 |

| | | |
|---|---|---|
| 33. | ದೇವರಬೆಟ್ಟ ರಿ.ಸ.ನಂ. 13 ರಲ್ಲಿ ಚೆಕ್ ಡ್ಯಾಂ ನಿರ್ಮಾಣ | 10.00 |
| 34. | ಕೋಟಗುಡ್ಡ ಗ್ರಾಮದ ಮಾರಪ್ಪನಗುಂಡಿ ಸಂದಿಗೆ ಇಂಗು ಕೆರೆ ನಿರ್ಮಾಣ | 30.00 |
| 35. | ನೇರಳೆಕುಂಟೆ ಮಾದವರಾಯನಪಾಳ್ಯಕ್ಕೆ ಹೋಗುವ ರಸ್ತೆಯಲ್ಲಿ ಬರುವ ಹಳ್ಳಕ್ಕೆ ಪಿಕಪ್ ಕಮ್ ಕಾಜುವೇ ನಿರ್ಮಾಣ | 100.00 |
| 36. | ಸಿಂಗರೆಡ್ಡಿಹಳ್ಳಿ ಸ.ನಂ. 19ರಲ್ಲಿ ಪಿಕಪ್ ನಿರ್ಮಾಣ | 10.00 |
| 37. | ಕುಮಾರ್ಲಹಳ್ಳಿ ರಿ.ಸ.ನಂ 16/4ರಲ್ಲಿ ಪಿಕಪ್ ನಿರ್ಮಾಣ | 10.00 |
| 38. | ವೈ.ಎನ್. ಹೊಸಕೋಟೆ ರಿ.ಸ.ನಂ. 149/2 ರಲ್ಲಿ ಚೆಕ್ ಡ್ಯಾಂ ನಿರ್ಮಾಣ | 10.00 |
| 39. | ಕುಮಾರ್ಲಹಳ್ಳಿ ಕುಂಬಗಾನಕುಂಟೆ ಅಭಿವೃದ್ಧಿ | 5.00 |
| 40. | ತಾಳೇಮರದಹಳ್ಳಿ ರಿ.ಸ.ನಂ. 40ರಲ್ಲಿ ಪಳವಳ್ಳಿ ಕೆರೆ ಫೀಡರ್ ಚಾನೆಲ್‌ಗೆ ಪಿಕಪ್ ನಿರ್ಮಾಣ | 5.00 |
| 41. | ಮುಮ್ಮಡಿಸಾಗರ ರಿ.ಸ.ನಂ. 6/2ರಲ್ಲಿ ಇಂಗು ಕೆರೆಫೆ ನಿರ್ಮಾಣ | 20.00 |
| 42. | ಕೊಡಗೇಹಳ್ಳಿ ದೊಡ್ಡಕೆರೆ ಹೂಳೆತ್ತುವ ಕಾಮಗಾರಿ | 5.00 |
| 43. | ಮರಿದಾಸನಹಳ್ಳಿ ವನಂತರಕೆರೆ ಹೂಳೆತ್ತುವ ಕಾಮಗಾರಿ | 10.00 |
| 44. | ಚಿಕ್ಕಹಳ್ಳಿ ಕಾಮನಬೆಟ್ಟದ ಹತ್ತಿರ ನೆರಲಪಾಯ ಹೊಸಕೆರೆ ನಿರ್ಮಾಣ | 50.00 |
| 45. | ಬೆಳ್ಳಿಬಟ್ಟಲು ದಾಸಣ್ಣ ಕೆರೆ ಹೂಳೆತ್ತುವ ಕಾಮಗಾರಿ | 10.00 |
| 46. | ಕನ್ನಮೇಡಿ ರಿ.ಸ.ನಂ. 130ರಲ್ಲಿ ಪಿಕಪ್ ನಿರ್ಮಾಣ | 20.00 |
| | ಒಟ್ಟು | **600.00** |

**ರುದ್ರಮೂರ್ತಿ**
ಸಹಾಯಕ ಕಾರ್ಯಪಾಲಕ ಇಂಜಿನೀಯರ್ ಹಾಗೂ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಬೆಲ್ಲದ ಬಾಗೇವಾಡಿ (ಸೈಟ್–2) ಗ್ರಾಮದ ಹತ್ತಿರ ಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2012–13/2144, ದಿನಾಂಕ: 11–04–2012.

2. ಸರ್ಕಾರದ ಆದೇಶ ಸಂಖ್ಯೆ: ಸನೀಇ 12 ಮಸಾವಿ 2011(5) (ತಾಂತ್ರಿಕ) ದಿನಾಂಕ: 27–06–2011ರಲ್ಲಿ

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಬೆಲ್ಲದ ಬಾಗೇವಾಡಿ (ಸೈಟ್–2) ಗ್ರಾಮದ ಹತ್ತಿರ ಕೆರೆ ನಿರ್ಮಾಣ ಕಾಮಗಾರಿಯು ಭಾರತ ಸರ್ಕಾರದ ಎ.ಐ.ಬಿ.ಪಿ. ಕಾರ್ಯಕ್ರಮದಡಿ ಅನುಮೋದನೆಗೊಂಡಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 27–02–2012 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 04–03–2012 |
| ಕನ್ನಡ ಪ್ರಭ ದಿನ ಪತ್ರಿಕೆ | 09–03–2012 |
| ಡೆಕ್ಕನ್ ಹೆರಾಲ್ಡ್ ದಿನ ಪತ್ರಿಕೆ | 03–03–2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ತಾಂತ್ರಿಕ ಬಿಡ್ ಅನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್ ಅನ್ನು ದಿನಾಂಕ: 27–03–2012ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 81,07,371/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 81,20,886/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಆಂದಾಜಿನ ದರಗಳ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ |

| | | | |
|---|---|---|---|
| ಹೆಚ್. ಕರುಣಾಕರ ಶೆಟ್ಟಿ ಒಂದನೇ ದರ್ಜೆ ಗುತ್ತಿಗೆದಾರರು | 97,56,304/– | 20.338 ಹೆಚ್ಚು | 20.138 ಹೆಚ್ಚು |
| ಜಯಶೀಲ ನಾರಾಯಣ ಶೆಟ್ಟಿ ಒಂದನೇ ದರ್ಜೆ ಗುತ್ತಿಗೆದಾರರು | 1,10,39,256/– | 36.163 ಹೆಚ್ಚು | 35.937 ಹೆಚ್ಚು |

ಮೇಲ್ಕಂಡಂತೆ ಶ್ರೀ ಹೆಚ್. ಕರುಣಾಕರ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 20.138ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನ ಮಾಡಿ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 81,20,886/– ಮೇಲೆ ಶೇ. 13 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 91,76,601/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 04 ಹೊಕೆನಿ (ತಾಂತ್ರಿಕ) 2012, ಬೆಂಗಳೂರು, ದಿನಾಂಕ: 09ನೇ ಮೇ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಬೆಲ್ಲದ ಬಾಗೇವಾಡಿ (ಸೈಟ್–2) ಗ್ರಾಮದ ಹತ್ತಿರ ಕೆರೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.81,20,886/– ಮೇಲೆ ಶೇ.13 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 91,76,601/– ಗಳಿಗೆ (ರೂ. ತೊಂಭತ್ತೊಂದು ಲಕ್ಷ ಎಪ್ಪತ್ತಾರು ಸಾವಿರದ ಆರುನೂರ ಒಂದು ಮಾತ್ರ)ಗಳಿಗೆ ಶ್ರೀ ಹೆಚ್. ಕರುಣಾಕರ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1512 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ ಮುದ್ದೇಬಿಹಾಳ್ ತಾಲ್ಲೂಕಿನ ಬಸರಕೋಡ ಗ್ರಾಮದ ಸರ್ವೆ ನಂ. 56, 160 ಯಮನಪ್ಪ ಶಿವಪ್ಪ ಮಾದರ ಹಾಗೂ ಇತರರ ಜಮೀನುಗಳಿಗೆ ಬೋರ್ ವೆಲ್ ಮೂಲಕ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** **1.** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–9/ಬಸರಕೋಡ ಏನೀಯೋ/2012–13/2139, ದಿನಾಂಕ:11–04–2012.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾಲ್ಲೂಕಿನ ಬಸರಕೋಡ ಗ್ರಾಮದ ಸರ್ವೆ ನಂ. 56, 160 ಯಮನಪ್ಪ ಶಿವಪ್ಪ ಮಾದರ ಹಾಗೂ ಇತರರ ಜಮೀನುಗಳಿಗೆ ಬೋರ್ ವೆಲ್ ಮೂಲಕ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯು 2011–12ನೇ ಸಾಲಿನ ವಿಶೇಷ ಘಟಕ ಯೋಜನೆಯಡಿ ಅನುಮೋದನೆ ಗೊಂಡಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಕಾರ್ಯಪಾಲಕ ಇಂಜಿನಿಯರ್ ಸಣ್ಣ ನೀರಾವರಿ ವಿಭಾಗ, ಬಿಜಾಪುರರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 30-01-2012 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 28-01-2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 2,18,225/– |

| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|
| ಐ.ಎಸ್. ಹುಲಸೂರ, ಗುತ್ತಿಗೆದಾರರು | 2,45,951/- | 12.705 ಹೆಚ್ಚು |

ಮೇಲ್ಕಂಡಂತೆ ಶ್ರೀ ಐ. ಎಸ್. ಹುಲಸೂರ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 12.705ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,18,225/-ಗಳ ಮೇಲೆ ಶೇ. 12.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.2,44,412/-ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 35 ಏನೀಯೋ(ತಾಂತ್ರಿಕ) 2012 ಬೆಂಗಳೂರು, ದಿನಾಂಕ: 09ನೇ ಮೇ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾಲ್ಲೂಕಿನ ಬಸರಕೋಡ ಗ್ರಾಮದ ಸರ್ವೇ ನಂ.56, 160 ಯಮನಪ್ಪ ಶಿವಪ್ಪ ಮಾದರ ಹಾಗೂ ಇತರರ ಜಮೀನುಗಳಿಗೆ ಬೋರ್ ವೆಲ್ ಮೂಲಕ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 2,18,225/-ಗಳ ಮೇಲೆ ಶೇ.12.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.2,44,412/-ಗಳಿಗೆ (ರೂ. ಎರಡು ಲಕ್ಷ ನಲವತ್ತನಾಲ್ಕು ಸಾವಿರದ ನಾಲ್ಕು ನೂರ ಹನ್ನೆರಡು ಮಾತ್ರ)ಗಳಿಗೆ ಶ್ರೀ ಐ.ಎಸ್. ಹುಲಸೂರ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20-01-2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1513 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಸಂಗಾವಿ ಗ್ರಾಮದ ಹತ್ತಿರ ಕಾಗಿಣಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ-14/2012-13/2225, ದಿನಾಂಕ:16-04-2012

2. ಸರ್ಕಾರದ ಆದೇಶ ಸಂಖ್ಯೆ: ಸನೀಇ 96 ಮಸಾವಿ 2011(3) (ತಾಂತ್ರಿಕ) ದಿನಾಂಕ: 20-10-2011.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಸಂಗಾವಿ ಗ್ರಾಮದ ಹತ್ತಿರ ಕಾಗಿಣಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯು ಭಾರತ ಸರ್ಕಾರದ ಎ.ಐ.ಬಿ.ಪಿ. ಕಾರ್ಯಕ್ರಮದಡಿ ಅನುಮೋದನೆಗೊಂಡಿರುತ್ತದೆ. ಈ ಕಾಮಗಾರಿಯು ಅಂದಾಜು ಪಟ್ಟಿಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 06-01-2012 |
| ಜಿಲ್ಲಾ ಟೆಂಡರ್ ಬುಲೆಟಿನ್ | 07-01-2012 |
| ಕನ್ನಡ ಪ್ರಭ ದಿನಪತ್ರಿಕೆ | 09-01-2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ನಾಲ್ಕು ಜನ ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ: 21–03–2012ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 9,17,27,682/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.9,21,19,264/– |

| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|
| ಮೆ. ಅಮೃತಾ ಕನ್‌ಸ್ಟ್ರಕ್ಷನ್ಸ್.ಪ್ರೈ ಲಿ., ಒಂದನೇ ದರ್ಜೆ ಗುತ್ತಿಗೆದಾರರು | 8,25,86,180/– | 9.965 ಕಡಿಮೆ | 10.3486 ಕಡಿಮೆ |
| ಶ್ರೀ ಸೋಮಶೇಖರ ವೆಂಕಪ್ಪಾ ಬಂಡಿ, ಒಂದನೇ ದರ್ಜೆ ಗುತ್ತಿಗೆದಾರರು | 8,71,48,959/– | 4.992 ಕಡಿಮೆ | 5.395 ಕಡಿಮೆ |

ಮೇಲ್ಕಂಡಂತೆ ಮೆ. ಅಮೃತಾ ಕನ್‌ಸ್ಟ್ರಕ್ಷನ್ಸ್.ಪ್ರೈ ಲಿ., ಒಂದನೇ ದರ್ಜೆ ಗುತ್ತಿಗೆದಾರರು, ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 10.3486 ರಷ್ಟು ಕಡಿಮೆಯಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಷ್ಕೃತ ಮೊತ್ತ ರೂ.9,21,19,264/–ಗಳ ಮೇಲೆ ಶೇ.10.3486ರಷ್ಟು ಕಡಿಮೆ ದರದಲ್ಲಿ ಅಂದರೆ ರೂ.8,25,86,180/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 63 ಅಪಿಬಂ(ತಾಂತ್ರಿಕ) 2012 ಬೆಂಗಳೂರು, ದಿನಾಂಕ: 09ನೇ ಮೇ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಸಂಗಾವಿ ಗ್ರಾಮದ ಹತ್ತಿರ ಕಾಗಿಣಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.9,21,19,264/–ಗಳ ಮೇಲೆ ಶೇ. 10.3486ರಷ್ಟು ಕಡಿಮೆ ದರದಲ್ಲಿ ಅಂದರೆ ರೂ.8,25,86,180/–ಗಳಿಗೆ (ರೂ. ಎಂಟು ಕೋಟಿ ಇಪ್ಪತ್ತೈದು ಲಕ್ಷ ಎಂಭತ್ತಾರು ಸಾವಿರದ ನೂರ ಎಂಭತ್ತು ಮಾತ್ರ)ಗಳಿಗೆ ಮೆ. ಅಮೃತಾ ಕನ್‌ಸ್ಟ್ರಕ್ಷನ್ಸ್.ಪ್ರೈಲಿ., ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1514 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ತೋಟಗಾರಿಕೆ ಸಚಿವಾಲಯ

ವಿಷಯ : ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಗೆ ಬೋಧಕ/ಬೋಧಕೇತರ ಹುದ್ದೆಗಳನ್ನು ಸೃಜಿಸುವ ಬಗ್ಗೆ.

ಓದಲಾಗಿದೆ : 1. ಕುಲಪತಿಗಳು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬಾಗಲಕೋಟೆರವರ ಪತ್ರ ಸಂಖ್ಯೆ : ಕುಪ/ಹುಸೃಮ/6074/10–11 ದಿನಾಂಕ : 30–10–2012.

2. ಕುಲಪತಿಗಳು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆರವರ ಪತ್ರ ಸಂಖ್ಯೆ : ಕುಪ/ಹುಸೃಮ/1049/2011–12 ದಿನಾಂಕ : 07–10–2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ : 1 ಮತ್ತು 2ರಲ್ಲಿ ಓದಲಾದ ಪತ್ರಗಳಲ್ಲಿ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಯ ವ್ಯಾಪ್ತಿಯಲ್ಲಿ ಹೊಸದಾಗಿ ಪ್ರಾರಂಭವಾಗಿರುವ ಹಾಗೂ ಈಗಾಗಲೇ ಕಾರ್ಯನಿರ್ವಹಿಸುತ್ತಿರುವ 7 ತೋಟಗಾರಿಕೆ ಮಹಾ ವಿದ್ಯಾಲಯ 12 ಹೊಸ ತೋಟಗಾರಿಕೆ

ಸಂಶೋಧನಾ ಕೇಂದ್ರಗಳು, ವಿಸ್ತರಣಾ ನಿರ್ದೇಶನಾಲಯ ಸೇರಿದಂತೆ ಅಗತ್ಯವಾಗಿ ಬೇಕಾಗಿರುವ 129 ಬೋಧಕ ಹಾಗೂ 253 ಬೋಧಕೇತರ ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಲು ವ್ಯವಸ್ಥಾಪಕ ಮಂಡಳಿಯು ಒಪ್ಪಿಗೆ ನೀಡಿದೆ. ಈ ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಲು ಸರ್ಕಾರದ ಅನುಮತಿಯನ್ನು ನೀಡುವಂತೆ ಕೋರಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 346 ತೋಇವಿ 2010, ಬೆಂಗಳೂರು, ದಿನಾಂಕ : 29 ನೇ ಮೇ 2012**

ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಯ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಸರ್ಕಾರವು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಯ ಮುಖ್ಯ ಕಛೇರಿ ಹಾಗೂ ಅದರ ಅಧೀನದಲ್ಲಿ ಬರುವ ತೋಟಗಾರಿಕೆ ಕಾಲೇಜುಗಳು, ಸಂಶೋಧನಾ ಕೇಂದ್ರಗಳು ಮತ್ತು ವಿಸ್ತರಣಾ ನಿರ್ದೇಶನಾಲಯಗಳಿಗೆ ಅಗತ್ಯವಾಗಿ ಬೇಕಾಗಿರುವ ಈ ಕೆಳಕಂಡಂತೆ 129 ಬೋಧಕ ಹಾಗೂ 253 ಬೋಧಕೇತರ ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಲು ಅನುಮತಿಯನ್ನು ನೀಡಲಾಗಿದೆ.

| Sl. No. | Name of the Post | No. of posts |
|---|---|---|
| TEACHING STAFF | | |
| 1 | Professor | 21 |
| 2 | Associate Professor | 38 |
| 3 | Assistant Professor | 66 |
| 4 | Technical Assistant | 04 |
| | **Total** | **129** |
| NONTEACHING STAFF | | |
| 1 | Deputy Administrative Officer | 21 |
| 2 | Deputy Registrar | 02 |
| 3 | Deputy Comptroller | 01 |
| 4 | Executive Engineer | 01 |
| 5 | Assistant Administrative Officer | 01 |
| 6 | Assistant Controller | 05 |
| 7 | Assistant Executive Engineer (Civil) | 01 |
| 8 | Assistant Medical Officer | 03 |
| 9 | Superintendent (Accounts) | 07 |
| 10 | Superintendent (General) | 08 |
| 11 | Personal Secretary | 05 |
| 12 | Assistant Engineer (Civil/Electrical | 01 |
| 13 | Assistant Engineer (Auto) | 01 |
| 14 | Senior Assistant | 19 |
| 15 | Stenographer | 10 |
| 16 | Junior Engineer (Civil) | 05 |
| 17 | Assistant Cum Computer Operator | 30 |
| 18 | Lab. Assistant | 20 |
| 19 | Field Assistant | 20 |
| 20 | Care Taker | 01 |
| 21 | Electrical Wireman | 05 |
| 22 | Pharmacist | 01 |
| 23 | Shelf Assistant | 05 |
| 24 | Tractor Driver | 05 |
| 25 | Driver (HV) | 05 |
| 26 | Draft Man | 01 |
| 27 | Driver (LV) | 10 |
| 28 | Cook cum Caretaker | 01 |

| | | |
|---|---|---|
| 29 | Attender | 01 |
| 30 | Plumber | 04 |
| 31 | Asst. Cook cum Caretaker | 05 |
| 32 | Pump Attender | 05 |
| 33 | Ward Boy | 01 |
| 34 | Messenger | 25 |
| 35 | Helper | 05 |
| 36 | Gardener | 16 |
| 37 | Watchman | 14 |
| 38 | Janitor | 02 |
| | **Total** | **253** |

ಮೇಲೆ ಸೃಜಿಸಲಾದ ಹುದ್ದೆಗಳಲ್ಲಿ ಕ್ರಮ ಸಂಖ್ಯೆ : 20 ರಿಂದ 38ರ ವರೆಗಿನ ಹುದ್ದೆಗಳಿಗೆ ಸೇವೆಯನ್ನು ಹೊರ ಗುತ್ತಿಗೆಯ ಆಧಾರದ ಮೇಲೆ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 389 Exp. 4/2010 ದಿನಾಂಕ : 10–05–2012 ರ ಸಹಮತಿ ಅನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1574

**ಬಿ.ಸಿ. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

ವಿಷಯ : 2011–12ನೇ ಸಾಲಿನ ಒಂದು ಬಾರಿಯ ಹೆಚ್ಚುವರಿ ಕೇಂದ್ರ ಸಹಾಯ {One Time Additional Central Assistance (OTACA)} ದಡಿ ಮೊಬೈಲ್ ಆಡಳಿತ (Mobile Governance under innovative project) ಮತ್ತು ಕೌಂಟರ್‌ನಲ್ಲಿ ನಾಗರೀಕರಿಗೆ ಸೇವೆಗಳ ವಿತರಣೆ (Over the counter delivery of citizen services) ಈ ಯೋಜನೆಗಳನ್ನು ಮಂಜೂರು ಮಾಡುವ ಬಗ್ಗೆ.

ಓದಲಾಗಿದೆ :
1. ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ದಿನಾಂಕ : 07–09–2011 ರ ಅನದಿಕೃತ ಟಿಪ್ಪಣಿ ಸಂಖ್ಯೆ : ಪಿಡಿ 31 ಪಿಎಫ್ಆರ್ 2009.
2. ದಿನಾಂಕ : 12–10–2011ರ ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಆಸುಇ 1 ಎಸಿಎ 2011.
3. ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ದಿನಾಂಕ : 13–11–2011 ರ ಅ.ಸ. ಪತ್ರ ಸಂಖ್ಯೆ : ಪಿಡಿ 31 ಎಫ್ಆರ್ಒ 2009.
4. ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ದಿನಾಂಕ : 16–02–2012 ರ ಅನಧಿಕೃತ ಟಿಪ್ಪಣಿ ಸಂಖ್ಯೆ : ಪಿಡಿ 26 ಎಫ್ಆರ್ಒ 2011.

**ಪ್ರಸ್ತಾವನೆ :**

1. 2011–12ನೇ ಸಾಲಿನ ಒಂದು ಬಾರಿಯ ಹೆಚ್ಚುವರಿ ಕೇಂದ್ರ ಸಹಾಯ {One Time Additional Central Assistance (OTACA)} ಕ್ಕೆ ಸಂಬಂಧಿಸಿದಂತೆ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ : 02–09–2011 ರಂದು ನಡೆದ ಸಭೆಯ ನಡವಳಿಯು, ಯೋಜನೆ, ಕಾರ್ಯಕ್ರಮ ಸಂಯೋಜಿಸಿ ಮತ್ತು ಸಾಂಖ್ಯಿಕ ಇಲಾಖೆಯ ಯೋಜನೆ ಹಣಕಾಸು ಮತ್ತು ಸಂಪನ್ಮೂಲ ವಿಭಾಗ (ಪಿಎಫ್ಆರ್)ದ, ಮೇಲೆ (1)ರಲ್ಲಿ ಓದಲಾದ ದಿನಾಂಕ : 07–09–2011ರ ಅನಧಿಕೃತ ಟಿಪ್ಪಣಿಯೊಂದಿಗೆ ಸ್ವೀಕೃತವಾಯಿತು. ಅದರಲ್ಲಿ ಉಲ್ಲೇಖಿಸಿದ ಮೊಬೈಲ್ ಆಡಳಿತ (Mobile Governance under innovative project) ಮತ್ತು ಕೌಂಟರ್‌ನಲ್ಲಿ ನಾಗರೀಕರಿಗೆ ಸೇವೆಗಳ ವಿತರಣೆ (Over the counter delivery of citizen services) ಈ ಯೋಜನೆಗಳಿಗೆ ಸಂಬಂಧಿಸಿದಂತೆ ಯೋಜನಾ ಪ್ರಸ್ತಾವನೆ (project proposal) ಗಳನ್ನು ಇ–ಆಡಳಿತ ಕೇಂದ್ರದ ವತಿಯಿಂದ ತಯಾರಿಸಲಾಗಿದೆ. ಸದರಿ ಯೋಜನೆಗಳಿಗಾಗಿ ಕ್ರಮವಾಗಿ ` 22.00 (ಇಪ್ಪತ್ತೆರಡು) ಕೋಟಿ ಮತ್ತು ` 15.00 (ಹದಿನೈದು) ಕೋಟಿ ವೆಚ್ಚವಾಗಲಿದೆಯೆಂದು ಅಂದಾಜು ಮಾಡಲಾಗಿದೆ. ಮೇಲೆ (2)ರಲ್ಲಿ ಓದಲಾದ ದಿನಾಂಕ : 12–10–2011ರ ಅನಧಿಕೃತ ಟಿಪ್ಪಣಿಯನ್ವಯ ಸದರಿ ಯೋಜನಾ ಪ್ರಸ್ತಾವನೆ (project proposal) ಗಳನ್ನು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಗೆ ಕಳುಹಿಸಲಾಯಿತು. ಆ ಇಲಾಖೆಯ ಮೇಲೆ (3)ರಲ್ಲಿ ಓದಲಾದ ದಿನಾಂಕ

: 13–11–2011ರ ಅ.ಸ.ಪತ್ರದನ್ವಯ ಸದರಿ ಯೋಜನ ಪ್ರಸ್ತಾವನೆಗಳಿಗೆ ಸಂಬಂಧಿಸಿದಂತೆ ಹೆಚ್ಚುವರಿ ಮಹಿತಿಯನ್ನು ನೀಡಬೇಕೆಂದು ಕೋರಲಾಯಿತು. ಅದಾದ ನಂತರ, ಆ ಇಲಾಖೆಯು, ಮೇಲೆ (4) ರಲ್ಲಿ ಓದಲಾದ ದಿನಾಂಕ : 16–02–2012ರ ಅದರ ಅನಧಿಕೃತ ಟಿಪ್ಪಣಿಯನ್ವಯ ಈ ಕೆಳಕಂಡ ಅಂಶಗಳನ್ನು ಸೂಚಿಸಿತು :–

1. ಸದರಿ ಯೋಜನಾ ಪ್ರಸ್ತಾವನೆಗಳಿಗೆ ಕೇಂದ್ರ ಸರ್ಕಾರದ ಯೋಜನಾ ಆಯೋಗದ ದಿನಾಂಕ : 18–10–2011 ಮತ್ತು 04–11–2011ರ ತನ್ನ ಪತ್ರಗಳನ್ವಯ ಅನುಮೋದನೆ ನೀಡಿರುವುದು;
2. ಅದಕ್ಕಾಗಿ ತಗಲುವ ಒಟ್ಟು ಯೋಜನಾ ವೆಚ್ಚದ ಶೇ. 30 ರಷ್ಟು ಕೇಂದ್ರ ಸರ್ಕಾರದ ಪಾಲಿನ ಅನುದಾನವನ್ನು ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡಲು ಕೇಂದ್ರ ಸರ್ಕಾರದ ಆರ್ಥಿಕ ಮಂತ್ರಾಲಯ ಅದರ ದಿನಾಂಕ : 14–02–2012ರ ಪತ್ರದನ್ವಯ ಮಂಜೂರಾತಿ ನೀಡಿರುವುದು ಮತ್ತು
3. ಶೇ. 30 ರಷ್ಟು ಅನುದಾನದ ಸದರಿ ಮೊತ್ತವನ್ನು ರಾಜ್ಯ ಸರ್ಕಾರದಿಂದ ಬಿಡುಗಡೆಗೊಳಿಸಕೊಳ್ಳಲು ಮತ್ತು ಆಯಾಯ ಪ್ರಸ್ತಾವನೆಯಲ್ಲಿ ನಮೂದಿಸಿದ ರಾಜ್ಯ ಸರ್ಕಾರದ ಪಾಲಿನ ಶೇ. 70 ರಷ್ಟು ಅನುದಾನದ ಮೊತ್ತವನ್ನು ಪಡೆದುಕೊಳ್ಳಲು ಆರ್ಥಿಕ ಇಲಾಖೆಯನ್ನು ಸಂಪರ್ಕಿಸಲು.

2. ಮೇಲಿನ ಅಂಶ (3) ರಂತೆ 2011–12ನೇ ಸಾಲಿನ ವಾರ್ಷಿಕ ಯೋಜನೆಯಡಿ ಒಂದು ಬಾರಿಯ ಹೆಚ್ಚುವರಿ ಕೇಂದ್ರ ಸಹಾಯ {One Time Additional Central Assistance (OTACA)} ದಡಿಯಲ್ಲಿ ಸದರಿ ಯೋಜನೆಗಳನ್ನು ಜಾರಿಗೊಳಿಸಲು ಸಹಮತಿ ನೀಡುವಂತೆ ಹಾಗೂ ಅಗತ್ಯ ಅನುದಾನವನ್ನು ಇ–ಆಡಳಿತ ಕೇಂದ್ರಕ್ಕೆ ಬಿಡುಗಡೆ ಮಾಡಲು ಸಹಮತಿ ನೀಡಲು ಆರ್ಥಿಕ ಇಲಾಖೆಯನ್ನು ಕೋರಲಾಯಿತು. ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 01 ಎಸಿಎ 2011, ಬೆಂಗಳೂರು, ದಿನಾಂಕ : 31ನೇ ಮಾರ್ಚ್ 2012**

3. ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ, 2011–12ನೇ ಸಾಲಿನ ಒಂದು ಬಾರಿಯ ಹೆಚ್ಚುವರಿ ಕೇಂದ್ರ ಸಹಾಯ {One Time Additional Central Assistance (OTACA)} ದಡಿ ಮೊಬೈಲ್ ಆಡಳಿತ (Mobile governance under innovative project) ಮತ್ತು ಕೌಂಟರ್‌ನಲ್ಲಿ ನಾಗರೀಕರಿಗೆ ಸೇವೆಗಳ ವಿತರಣೆ (Over the counter delivery of citizen services) ಈ ಯೋಜನೆಗಳನ್ನು ಜಾರಿಗೊಳಿಸಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

4. ಈ ಉದ್ದೇಶಕ್ಕಾಗಿ ಇ–ಆಡಳಿತ ಕೇಂದ್ರ ಬೆಂಗಳೂರು ಇದಕ್ಕೆ ` 5.00 (ಐದು) ಕೋಟಿಗಳ ಮೊತ್ತವನ್ನು ಈ ಮೂಲಕ ಬಿಡುಗಡೆ ಮಾಡಿದೆ.

5. ಸದರಿ ಮೊತ್ತವನ್ನು ಅನುದಾನದ ಬಿಲ್ಲು/ಸ್ವೀಕರ್ತನ ರಸೀದಿಯಲ್ಲಿ ಡ್ರಾ ಮಾಡಲು ಮತ್ತು ಈ ಬಿಲ್ಲನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)ರ ಬಡವಾಡೆ ಅಧಿಕಾರಿಯು ದೃಢೀಕರಿಸಲು ಅನುಮತಿ ನೀಡಿದೆ.

6. ಈ ವೆಚ್ಚವನ್ನು ಪ್ರಸಕ್ತ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "3451–00–090–2–04–059" ವಿದ್ಯುನ್ಮಾನ ಆಡಳಿತ ಯೋಜನೆ ಇತರೆ ವೆಚ್ಚಗಳು (ಯೋಜನೆ)", ಅಡಿಯಲ್ಲಿ ಭರಿಸತಕ್ಕದ್ದು.

7. ಆರ್ಥಿಕ ಇಲಾಖೆಯ ದಿನಾಂಕ : 30–03–2012ರ ಟಿಪ್ಪಣಿ ಸಂಖ್ಯೆ : ಆಇ/322/ವೆಚ್ಚ–12/2012ರನ್ವಯ ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ನಿಗದಿಪಡಿಸಿದ ಉಳಿತಾಯವನ್ನು ಸಡಲಿಸಿ ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ನೀಡಿದ ಸಹಮತಿಯಂತೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪ್ರಶಾಂತ್‌ಕುಮಾರ್ ಎಸ್.ಬಿ)**
ಪೀಠಾಧಿಕಾರಿ–2
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಇ–ಆಡಳಿತ)

ಪಿ.ಆರ್.1575

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ವಿಷಯ : ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸೇವೆಗಳನ್ನು ಒದಗಿಸುತ್ತಿರುವ ಇಲಾಖೆಗಳಲ್ಲಿ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.

ಓದಲಾಗಿದೆ : **1.** ಆರ್ಥಿಕ ಇಲಾಖೆಯು ನೀಡಿರುವ ಕ್ರಮಾಂಕ ಆಇ 310 ವೆಚ್ಚ–12/2012 ದಿನಾಂಕ : 10–05–2012.ರ ಸಹಮತಿ
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 08 ಈಸಪ 2011 ದಿನಾಂಕ : 15–05–2012 ಮತ್ತು ತಿದ್ದುಪಡಿ ದಿನಾಂಕ 15–05–2012.

**ಪ್ರಸ್ತಾವನೆ :**

ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸೇವೆಗಳನ್ನು ಒದಗಿಸುತ್ತಿರುವ ಇಲಾಖೆಗಳಲ್ಲಿ ಡಾಟಾ ಎಂಟ್ರಿ ಆಪರೇಟರುಗಳನ್ನು ಹಾಗೂ ಇನ್ನಿತರ ಅವಶ್ಯಕವಾದ ಹುದ್ದೆಗಳನ್ನು ಭರ್ತಿ ಮಾಡುವ ಹಾಗೂ ತಕ್ಷಣ 6 ತಿಂಗಳ ಅವಧಿಗೆ ನಿವೃತ್ತ ಅಧಿಕಾರಿಗಳನ್ನು ನೇಮಿಸಿಕೊಳ್ಳುವ ಬಗ್ಗೆ ಆರ್ಥಿಕ ಇಲಾಖೆಯು ಮೇಲೆ (1) ರಲ್ಲಿ ನೀಡಿರುವ ಸಹಮತಿಯನ್ವಯ ಮೇಲೆ (2) ರಲ್ಲಿ ಹೇಳಿರುವ ಆದೇಶವನ್ನು ಹೊರಡಿಸಲಾಗಿದೆ.

ನಂತರದಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸೇವೆಗಳನ್ನು ಒದಗಿಸಲು ಇಲಾಖೆಗಳು ಕೋರಿರುವಂತೆ ಡಾಟಾ ಎಂಟ್ರಿ ಆಪರೇಟರುಗಳು ಹಾಗೂ ಇನ್ನಿತರ ಅವಶ್ಯವಾದ ಸಿಬ್ಬಂದಿಯನ್ನು ಭರ್ತಿ ಮಾಡುವ ಬಗ್ಗೆ ಪ್ರಸ್ತಾವನೆಯನ್ನು ಸಚಿವಸಂಪುಟದ ಅನುಮೋದನೆಗೆ ಮಂಡಿಸಲಾಗಿತ್ತು. ದಿನಾಂಕ : 26–05–2012 ರಂದು ನಡೆದ ಸಚಿವಸಂಪುಟದ ಸಭೆಯಲ್ಲಿ ವಿವಿಧ ಇಲಾಖೆಗಳಲ್ಲಿ ಖಾಲಿ ಇರುವ ಹಾಗೂ ಅವಶ್ಯವಾಗಿ ಬೇಕಾದ 400 ಹುದ್ದೆಗಳನ್ನು ಮೇಲಿನ (1) ರಲ್ಲಿನ ಆರ್ಥಿಕ ಇಲಾಖೆಯು ನೀಡಿರುವ ಅಭಿಪ್ರಾಯದಂತೆ ತಕ್ಷಣ ತುಂಬಲು ಸಚಿವಸಂಪುಟವು ಅನುಮೋದನೆ ನೀಡಿದೆ. ಈಗಾಗಲೇ ಸದರಿ ಹುದ್ದೆಗಳನ್ನು ತುಂಬಲು ಮೇಲಿನ (2) ರಲ್ಲಿ ಓದಲಾದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ.

ಮುಂದುವರೆದು ವಿವಿಧ ಇಲಾಖೆಗಳಲ್ಲಿ ಖಾಲಿಯಿರುವ ಹುದ್ದೆಗಳನ್ನು ತುಂಬುವ ವಿಷಯದಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಸಂಬಂಧಪಟ್ಟ ಅಧಿಕಾರಿಗಳೊಂದಿಗೆ ಒಂದು ಸಭೆಯನ್ನು ನಡೆಸಿ ನಂತರ ಸೂಕ್ತ ಶಿಫಾರಸುಗಳೊಂದಿಗೆ ಮಾನ್ಯ ಮುಖ್ಯಮಂತ್ರಿಗಳಿಗೆ ಮಂಡಿಸಿ, ಅವರಿಂದ ಅನುಮೋದನೆ ಪಡೆದು ನಂತರ ಉಳಿದ ಹುದ್ದೆಗಳನ್ನು ತುಂಬಲು ಕ್ರಮ ಜರುಗಿಸಬೇಕೆಂದು ಸಚಿವ ಸಂಪುಟವು ನಿರ್ಧರಿಸಿದೆ.

ಅದರಂತೆ, ದಿನಾಂಕ : 28–05–2012 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ (ಆಸು) ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ) ಇವರೊಂದಿಗೆ ನಡೆಸಿದ ಸಭೆಯಲ್ಲಿ ಒಟ್ಟಾರೆಯಾಗಿ ಚರ್ಚಿಸಿ ತೆಗೆದುಕೊಂಡಿರುವ ತೀರ್ಮಾನದ ಹಿನ್ನೆಲೆಯಲ್ಲಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 08 ಈಸಪ 2011, ಬೆಂಗಳೂರು ದಿನಾಂಕ: 5ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ದಿನಾಂಕ : 28–05–2012 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೆಗೆದುಕೊಂಡಿರುವ ತೀರ್ಮಾನದಂತೆ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸೇವೆಗಳನ್ನು ಒದಗಿಸುತ್ತಿರುವ ಇಲಾಖೆಗಳಲ್ಲಿ ಕೆಳಕಂಡಂತೆ ಡಾಟಾ ಎಂಟ್ರಿ ಆಪರೇಟರುಗಳನ್ನು ನೇಮಕ ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

(ಅ) ಸಾರಿಗೆ ಇಲಾಖೆಯ ಸಾರಿಗೆ ನಿಗಮಗಳು : ಬಸ್ ಪಾಸುಗಳಿಗೆ ಈಗ ಬೇಡಿಕೆಯಿರುವುದರಿಂದ ಸಾರಿಗೆ ನಿಗಮಗಳು ಮೂರು ತಿಂಗಳ ಅವಧಿಗೆ ಮಾತ್ರ ಸೀಮಿತಗೊಳಿಸಿ ಅತ್ಯಂತ ಅವಶ್ಯವಾಗಿ ಬೇಕಾದಂತಹ ಕನಿಷ್ಠ ಸಂಖ್ಯೆಯಲ್ಲಿ ಡಾಟಾ ಎಂಟ್ರಿ ಆಪರೇಟರುಗಳನ್ನು ನೇಮಿಸಿಕೊಳ್ಳಲು ಅನುಮೋದನೆ ನೀಡಲಾಗಿದೆ.

(ಆ) ಶಿಕ್ಷಣ ಇಲಾಖೆ : 20 ಹುದ್ದೆಗಳು

(ಇ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವಿಕಲಚೇತನ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ : 30 ಹುದ್ದೆಗಳು (ಜಿಲ್ಲೆಗೆ ಒಂದರಂತೆ)

ಮೇಲಿನ ಡಾಟಾ ಎಂಟ್ರಿ ಆಪರೇಟರುಗಳನ್ನು ಇಲಾಖೆಯಲ್ಲಿ ಮಂಜೂರಾಗಿರುವ ಹುದ್ದೆಗಳಲ್ಲಿ ಖಾಲಿ ಇರುವ ಬೆರಳಚ್ಚುಗಾರರು/ದ್ವಿತೀಯ ದರ್ಜೆ ಸಹಾಯಕರು ಹುದ್ದೆಗಳೆದುರಾಗಿ ಸದರಿ ಹುದ್ದೆಗಳು ನಿಯಮಾನುಸಾರ ಭರ್ತಿಯಾಗುವವರೆಗೆ ಅಥವಾ ಆರು ತಿಂಗಳ ಅವಧಿಗೆ ಸಂಚಿತ ವೇತನದಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳತಕ್ಕದ್ದು.

ಈ ಮೇಲಿನ ನೇಮಕಾತಿಗಳಿಗೆ ತಗಲುವ ವೆಚ್ಚವನ್ನು ಸಂಬಂಧಿತ ಇಲಾಖೆಗಳು ಆಯಾ ಇಲಾಖೆಗಳ ಕಚೇರಿ ವೆಚ್ಚಗಳ ಲೆಕ್ಕ ಶೀರ್ಷಿಕೆಯಡಿಯಲ್ಲಿ ಭರಿಸುವುದು.

ಈ ಆದೇಶವನ್ನು ದಿನಾಂಕ : 28–05–2012 ರಂದು ನಡೆದ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1576

**ಕೆ.ಜಿ. ಶಶಿಕಲಾ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ.)

ಸಿಆಸುಇ (ಆಸು–ಕಾರ್ಯಾಧ್ಯಯನ)

## ಇಂಧನ ಸಚಿವಾಲಯ

ವಿಷಯ : ಮೆ॥ ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ 2005–06ನೇ ಸಾಲಿನಲ್ಲಿ ಹಂಚಿಕೆಯಾಗಿರುವ ಪವನ ವಿದ್ಯುತ್ ಯೋಜನೆ ಸಾಮರ್ಥ್ಯದಲ್ಲಿ ಪ್ರಗತಿ ಕಾಣದ ಯೋಜನೆಗಳನ್ನು ರದ್ದುಪಡಿಸುವ ಬಗ್ಗೆ.

ಓದಲಾಗಿದೆ :

1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 283 ಎನ್‌ಸಿಇ 2005, ದಿನಾಂಕ : 14–10–2005.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 284 ಎನ್‌ಸಿಇ 2005, ದಿನಾಂಕ : 14–10–2005.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 463 ಎನ್‌ಸಿಇ 2006, ದಿನಾಂಕ : 22–12–2006.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : KRED/08VWTIPL-36.3 MW/2011/4717 ದಿನಾಂಕ : 24–12–2011.

5. ಕಾರಣ ಕೇಳುವ ನೋಟೀಸ್ ಸಂಖ್ಯೆ ಇಎನ್ 441 ಎನ್ ಸಿಇ 2011 ದಿನಾಂಕ : 18–04–2012.

6. ಅಭಿವೃದ್ಧಿದಾರರ ಪತ್ರ ದಿನಾಂಕ : 26–04–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಮೆ॥ ಎನ್.ಇ.ಜಿ. ಮೈಕಾನ್ ಇಂಡಿಯ ಲಿಮಿಟೆಡ್ ಕಂಪನಿಗೆ ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಗಳ ವಿವಿಧ ಸ್ಥಳಗಳಲ್ಲಿ ಒಟ್ಟು 26.4 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : (2) ರ ಸರ್ಕಾರಿ ಆದೇಶದಲ್ಲಿ ಮೆ॥ ಎನ್.ಇ.ಜಿ. ಮೈಕಾನ್ ಇಂಡಿಯಾ ಲಿಮಿಟೆಡ್ ಕಂಪನಿಗೆ ಬೆಳಗಾಂ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ಒಟ್ಟು 9.9 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : (3) ರ ಸರ್ಕಾರಿ ಆದೇಶದಲ್ಲಿ ಮೆ॥ ಎನ್.ಇ.ಜಿ. – ಮೈಕಾನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ॥ ವೆಸ್ಟಾಸ್ ವಿಂಡ್ ಟೆಕ್ನಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2005–06 ನೇ ಸಾಲಿನಲ್ಲಿ ಹಂಚಿಕೆಯಾಗಿರುವ ಮೇಲ್ಕಂಡ 36.30 ಮೆ.ವ್ಯಾ. ಪವನ ವಿದ್ಯುತ್ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಕಾಣದೇ ಇರುವ ಕಾರಣ ಸದರಿ ಯೋಜನೆಗಳನ್ನು ರದ್ದುಪಡಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಮೆ॥ ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಯಾವುದೇ ಪ್ರಗತಿಯನ್ನು ಸಾಧಿಸಿಲ್ಲದ್ದರಿಂದ ಅಭಿವೃದ್ಧಿದಾರರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದುಪಡಿಸಬಾರದು ಎಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರ ಪತ್ರದಲ್ಲಿ ಅಭಿವೃದ್ಧಿದಾರರು ಕಾರಣ ಕೇಳುವ ನೋಟೀಸಿಗೆ ಉತ್ತರಿಸುತ್ತಾ ಸದರಿ ಯೋಜನೆಯು ಪಶ್ಚಿಮ ಘಟ್ಟ ವ್ಯಾಪ್ತಿಯಲ್ಲಿ ಬರುತ್ತಿದ್ದು ಅರಣ್ಯ ಇಲಾಖೆಯು ಪಶ್ಚಿಮ ಘಟ್ಟ ಪ್ರದೇಶಗಳಲ್ಲಿ ಯೋಜನೆಗಳನ್ನು ಕೈಗೆತ್ತಿಕೊಳ್ಳುವ ಬಗ್ಗೆ ಒಂದು ನಿರ್ಣಯವನ್ನು ಕೈಗೊಳ್ಳುವವರೆಗೆ ಯಾವುದೇ ಅಭಿವೃದ್ಧಿ ಕೆಲಸಗಳನ್ನು ಕೈಗೆತ್ತಿಕೊಳ್ಳಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿರುತ್ತಾರೆ.

ಯೋಜನೆಯು 2005–06 ನೇ ಸಾಲಿನಲ್ಲಿ ಹಂಚಿಕೆಯಾಗಿದ್ದರೂ ಸಹ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ॥ ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಯಾವುದೇ ಪ್ರಗತಿಯನ್ನು ಸಾಧಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಹಾಗೂ ಸದರಿ ಯೋಜನೆಗಳು ಪಶ್ಚಿಮ ಘಟ್ಟ ಪ್ರದೇಶದಲ್ಲಿ ಬರುವುದರಿಂದ ಮತ್ತು ಅರಣ್ಯ ಇಲಾಖೆಯ ವಿಂಡ್ ಮಾಸ್ಟ್ ಹಾಕಲು ನೀಡಲಾಗಿದ್ದ ಅನುಮತಿಯನ್ನು ಪಡೆದಿರುವ ಹಿನ್ನೆಲೆಯಲ್ಲಿ ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇನ್ 441 ಎನ್ ಸಿಇ 2011, ಬೆಂಗಳೂರು, ದಿನಾಂಕ: 28ನೇ ಮೇ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆ॥ ವೆಸ್ಟಾಸ್ ವಿಂಡ್ ಟೆಕ್ನಾಲಜಿ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಸರ್ಕಾರಿ ಆದೇಶ ಸಂಖ್ಯೆ ಇಎನ್ 283 ಎನ್ ಸಿಇ 2005 ದಿನಾಂಕ : 14–10–2005 ಮತ್ತು ಆದೇಶ ಸಂಖ್ಯೆ ಇಎನ್ 284 ಎನ್‌ಸಿಇ 2005 ದಿನಾಂಕ : 14–10–2005 ರಲ್ಲಿ ಈ ಕೆಳಗೆ ವಿವರಿಸಿರುವಂತೆ ಹಂಚಿಕೆಯಾಗಿರುವ ಒಟ್ಟು 36.30 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

| ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ | ಯೋಜನಾ ಸ್ಥಳ | ಸಾಮರ್ಥ್ಯ (ಮೆಗಾವ್ಯಾಟ್ ಗಳಲ್ಲಿ) |
|---|---|---|
| ಇನ್ 283 ಎನ್ ಸಿ ಇ 2005 ದಿನಾಂಕ : 14–10–2005 | ಉತ್ತರ ಕನ್ನಡ ಜಿಲ್ಲೆಯ ನ್ಯಾಸರ್ಗಿ, ಸನ್ವಳ್ಳಿ, ಅಯ್ಯನ್ನೇರಿಗುಡ್ಡ ಮತ್ತು ಯಲ್ಲಾಪುರ ಗ್ರಾಮಗಳಲ್ಲಿ | 26.4 |
| ಇನ್ 284 ಎನ್ ಸಿಇ 2005 ದಿನಾಂಕ : 14–10–2005 | ಬೆಳಗಾವಿ ಜಿಲ್ಲೆಯ ಚಂದು ಡೊಂಗಾರ್, ಸಂಶೇರ್ಗಢ್ ಮತ್ತು ಸವರ್ಗಾಲಿ. | 9.9 |
| | ಒಟ್ಟು | 36.30 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಪಿ.ಆರ್.1577

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ಇಂಧನ ಸಚಿವಾಲಯ

ವಿಷಯ : ಮೆ॥ ಎನ್‌ಎಸ್‌ಬಿ ಇನ್ಫ್ರಾಸ್ಟ್ರಕ್ಚರ್ ಮತ್ತು ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ 0.85 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ॥ ಆರ್ ಎಸ್ ಆರ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಂದ ವರ್ಗಾವಣೆ ಮಾಡುವ ಬಗ್ಗೆ.

ಓದಲಾಗಿದೆ :

1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 337 ಎನ್‌ಸಿಇ 2006, ದಿನಾಂಕ : 16–10–2006.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 9 ಎನ್‌ಸಿಇ 2007, ದಿನಾಂಕ : 12–01–2007.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 432 ಎನ್‌ಸಿಇ 2010, ದಿನಾಂಕ : 16–12–2010.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : KRED/08/NSBIPPL-10-20 MW (RSR 30.6)/2011/2684 ದಿನಾಂಕ : 09/10–09–2011.
5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : KRED/08/NSBIPPL-10-20 MW (RSR 30.6)/2012/1434 ದಿನಾಂಕ : 18/05–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಮೆ॥ ಆರ್. ಶ್ರೀ ರಾಮುಲು ರೆಡ್ಡಿ ಮತ್ತು ಕೋ ಕಂಪನಿಗೆ ದಾವಣಗೆರೆ, ಬಳ್ಳಾರಿ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ 63 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : (2) ರ ಸರ್ಕಾರಿ ಆದೇಶದಲ್ಲಿ ಮೆ॥ ಆರ್. ಶ್ರೀ ರಾಮುಲು ರೆಡ್ಡಿ ಮತ್ತು ಕೋ ಹೆಸರನ್ನು ಮೆ॥ ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : (3) ರ ಆದೇಶದಲ್ಲಿ ಹಂಚಿಕೆಯಾಗಿರುವ ಒಟ್ಟು ಸಾಮರ್ಥ್ಯದ ಅಂಶಿಕ ಸಾಮರ್ಥ್ಯವಾಗಿರುವ 7 ಮೆ.ವ್ಯಾ. ಸಾಮರ್ಥ್ಯವನ್ನು 30.60 ಮೆ.ವ್ಯಾ.ಗೆ ಹೆಚ್ಚಿಸಿ ಬೆಳಗಾವಿ ಜಿಲ್ಲೆಯ, ಶಿರ್ಗಾಂವ್, ನಗರಹಾಳ್ ಮತ್ತು ಗಿರ್ಗಾಂವ್ ಇಲ್ಲಿ ಅನುಷ್ಠಾನ ಮಾಡಲು ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಅನುಮೋದನೆ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಅನುಮತಿಸಲಾದ 30.6 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 10.20 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ॥ ಎನ್‌ಎಸ್‌ಬಿ ಇನ್ಫ್ರಾಸ್ಟ್ರಕ್ಚರ್ ಮತ್ತು ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಸದರಿ ಪ್ರಸ್ತಾವನೆ ಪರಿಶೀಲನೆಯಲ್ಲಿದ್ದ ಸಮಯದಲ್ಲಿ ಮೆ॥ ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ಮೆ॥ ಎನ್‌ಎಸ್‌ಬಿ ಇನ್ಫ್ರಾಸ್ಟ್ರಕ್ಚರ್ ಮತ್ತು ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಹಣಕಾಸಿನ ತೊಂದರೆಯನ್ನು ಎದುರಿಸುತ್ತಿರುವುದರಿಂದ ವರ್ಗಾವಣೆ ಆದೇಶವನ್ನು ತಡೆಹಿಡಿಯುವಂತೆ ಕೋರಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿದ್ದರು. ಈ ಹಿನ್ನೆಲೆಯಲ್ಲಿ ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಪರಿಶೀಲಿಸಿ ವರದಿ ನೀಡುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಮಿತ ಇವರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಪತ್ರದಲ್ಲಿ : ಮೆ॥ ಆರ್ ಎಸ್ ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಅನುಮತಿಸಲಾದ 30.6 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ0.85 ಮೆ.ವ್ಯಾ. (GNS-19) ಸಾಮರ್ಥ್ಯದ ಯೋಜನೆಯನ್ನು ಮೆ॥ ಎನ್ ಎಸ್ ಬಿ ಇನ್ಫ್ರಾಸ್ಟ್ರಕ್ಚರ್ ಮತ್ತು ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ವರ್ಗಾಯಿಸುವ ಅಭಿವೃದ್ಧಿದಾರರ ಕೋರಿಕೆಯನ್ನು ಪರಿಗಣಿಸಬಹುದಾಗಿದೆ ಎಂದು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಮೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ತಿಳಿಸಿರುತ್ತಾರೆ ಹಾಗೂ ಪ್ರಸ್ತಾವಿತ ಅಭಿವೃದ್ಧಿದಾರರು ಈ ಯೋಜನೆಯನ್ನು ದಿನಾಂಕ : 30–06–2012ರೊಳಗೆ ಅನುಷ್ಠಾನಗೊಳಿಸಲಾಗುವುದೆಂದು ಮತ್ತು ಉತ್ಪಾದನೆ ಆಗುವ ವಿದ್ಯುತ್ತನ್ನು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಪ್ಪಂದದ ಮೂಲಕ ಸರಬರಾಜು ಮಾಡಲಾಗುವುದೆಂದು ತಿಳಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 362 ಎನ್‌ಸಿಇ 2011, ಬೆಂಗಳೂರು, ದಿನಾಂಕ: 4ನೇ ಜೂನ್ 2012**

ಮೆ॥ ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಅನುಮತಿಸಲಾದ 30.6 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.85 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ॥ ಎನ್ ಎಸ್ ಬಿ ಇನ್ಫ್ರಾಸ್ಟ್ರಕ್ಚರ್ ಮತ್ತು ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಈ ಕೆಳಕಂಡ ಶೆಡ್ಯೂಲ್ ನಲ್ಲಿ ವಿವರಿಸಿರುವಂತೆ ಹಾಗೂ ಈ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲು ಸರ್ಕಾರದ ಅನುಮತಿ ನೀಡಲಾಗಿದೆ :–

| Village Name | Taluk & District | Land survey Number | Estent in Land (Ac) | WTG Number |
|---|---|---|---|---|
| Nej | Chikkodi/Belgaum | 50 | 2 Acres per WTG of capacity 0.85 MW | GNS-19 |

1. ಮೆ॥ ಎನ್ ಎಸ್ ಬಿ ಇನ್ಫ್ರಾಸ್ಟ್ರಕ್ಚರ್ ಮತ್ತು ಪ್ರಾಜೆಕ್ಟ್ಸ್ ಲಿಮಿಟೆಡ್ ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್ ಸಿಇ 06–01–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಮೆ॥ ಎನ್ ಎಸ್ ಬಿ ಇನ್ಫ್ರಾಸ್ಟ್ರಕ್ಚರ್ ಮತ್ತು ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರು ವಿದ್ಯುತ್ ಖರೀದಿ ಒಪ್ಪಂದವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ಮಾಡಿಕೊಳ್ಳತಕ್ಕದ್ದು.
3. ಸದರಿ ಯೋಜನೆಯನ್ನು ದಿನಾಂಕ : 30–06–2012 ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು. (Commitment letter)
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್.1578 ಇಂಧನ ಇಲಾಖೆ

## ಇಂಧನ ಸಚಿವಾಲಯ

ವಿಷಯ : ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2012–13ರ ಹಣಕಾಸು ವರ್ಷದಲ್ಲಿ ಮೊದಲ ತ್ರೈಮಾಸಿಕ ಅವಧಿಗೆ ಕಂತು ಸಹಾಯಾನುದಾನದ ಹಣ ಬಿಡುಗಡೆ ಕುರಿತು.

ಓದಲಾಗಿದೆ : ಕವಿನಿ ಆಯೋಗದ ಪತ್ರ ಸಂಖ್ಯೆ : ನಂ. ಎಫ್/01/3/772 ದಿನಾಂಕ : 11–05–2012.

**ಪ್ರಸ್ತಾವನೆ :**

1. 2012–13 ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯನುದಾನ ಸಲುವಾಗಿ ರೂ. 425.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಈ ಸಹಾಯಾನುದನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ 2012–14 ನೇ ಸಾಲಿಗೆ ಮೊದಲ ತ್ರೈಮಾಸಿಕ ಅವಧಿಗೆ ಸಹಾಯಾನುದನ ರೂ. 106.25 ಲಕ್ಷಗಳನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗಕ್ಕೆ ಬಿಡುಗಡೆ ಮಾಡು ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 19 ಪಿಎಸ್ ಆರ್ 2012, ಬೆಂಗಳೂರು, ದಿನಾಂಕ: 2ನೇ ಜೂನ್ 2012**

ಸರ್ಕಾರವು, 2012–13ನೇ ಹಣಕಾಸು ವರ್ಷದ ಮೊದಲ ತ್ರೈಮಾಸಿಕ ಅವಧಿಗೆ ಲೆಕ್ಕ ಶೀರ್ಷಿಕೆ "2801–80–101–1–07–101 ಸಹಾಯಾನುದಾನ (ಯೋಜನೇತರ)" ಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ. 106.25/– ಲಕ್ಷ (ಒಂದು ನೂರ ಆರು ಲಕ್ಷ ಮತ್ತು ಇಪ್ಪತ್ತೈದು ಸಾವಿರ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2012 ದಿನಾಂಕ: 27–04–2012 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಪಿ.ಆರ್.1579 ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ಒಳಾಡಳಿತ ಸಚಿವಾಲಯ

ವಿಷಯ : ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 09 ದ್ವಿತೀಯ ದರ್ಜೆ ಸಹಾಯಕರ ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

ಓದಲಾಗಿದೆ :
1. ಸರ್ಕಾರದ ಆದೇಶ ಸಂ:ಲಾ 130 ಎಲ್‌ಎಜಿ 79, ದಿನಾಂಕ:07-10-1980
2. ಸರ್ಕಾರದ ಆದೇಶ ಸಂ:ಒಇ 428 ಪಿಪಿಇ 2010, ದಿನಾಂಕ:13-07-2011.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ:ಡಿಪಿಎನ್/ಕೇಂಸ/ವಿವ/33/2011-12, ದಿನಾಂಕ:07-07-2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ:07-10-1980ರ ಸರ್ಕಾರದ ಆದೇಶದನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ 23 ದ್ವಿತೀಯ ದರ್ಜೆ ಸಹಾಯಕರ ಹುದ್ದೆಯನ್ನು ಮೊದಲಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:13-07-2011ರ ಸರ್ಕಾರದ ಆದೇಶದನ್ವಯ, ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶಗಳನ್ವಯ ಸೃಜಿಸಲಾದ 23 ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳಲ್ಲಿ 02 ಹುದ್ದೆಗಳು ರದ್ದಾಗಿದ್ದರಿಂದ, ಇನ್ನುಳಿದ 21 ತಾತ್ಕಾಲಿಕ ಹುದ್ದೆಗಳನ್ನು ಕಾಲ-ಕಾಲಕ್ಕೆ ಮುಂದುವರಿಸಿಕೊಂಡು ಬಂದು, ಪ್ರಸ್ತುತ ದಿನಾಂಕ:31-03-2012ರವರೆಗೆ ಮುಂದುವರೆಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ:07-07-2011ರ ಪತ್ರದಲ್ಲಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ ಸೃಜಿಸಿ ಕಾಲ-ಕಾಲಕ್ಕೆ ಮುಂದುವರಿಸಿಕೊಂಡು ಬಂದು ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ದಿನಾಂಕ:31-03-2012ರವರೆಗೆ ಮುಂದುವರೆಸಿರುವ ತಾತ್ಕಾಲಿಕ ಹುದ್ದೆಗಳಲ್ಲಿ 09 ಹುದ್ದೆಗಳನ್ನು ಖಾಯಂಗೊಳಿಸುವುದು ಇಲಾಖೆಯ ದೈನಂದಿನ ಆಡಳಿತಾತ್ಮಕ ಕಾರ್ಯದ ದೃಷ್ಟಿಯಿಂದ ಅತಿ ಅವಶ್ಯಕ ಹುದ್ದೆಗಳಾಗಿದ್ದು, ಇವುಗಳನ್ನು ಇಲಾಖೆಯ ಹಿತದೃಷ್ಟಿಯಿಂದ ಅವಶ್ಯಕವಾಗಿದೆ. ಆದ್ದರಿಂದ, ಸದರಿ 09 ದ್ವಿತೀಯ ದರ್ಜೆ ಸಹಾಯಕರ ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 297 ಪಿಪಿಇ 2011, ಬೆಂಗಳೂರು, ದಿನಾಂಕ: 02ನೇ ಜೂನ್ 2012**

ಮೇಲಿನ ವಿವರಗಳ ಹಿನ್ನೆಲೆಯಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಈ ಮುಂದಿನ ಅಂಕಣ (2)ರಲ್ಲಿನ ಕಛೇರಿಗಳಿಗೆ ಹೊಂದಿಕೊಂಡಂತೆ ಅಂಕಣ (3)ರ ಸರ್ಕಾರಿ ಆದೇಶದನ್ವಯ ಸೃಜನೆಯಾಗಿರುವ 09 ದ್ವಿತೀಯ ದರ್ಜೆ ಸಹಾಯಕರ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸಿದೆ.

| ಕ್ರ.ಸಂ. | ಕಛೇರಿ | ಹುದ್ದೆಯು ಮಂಜೂರಾದ ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|
| (1) | (2) | (3) |
| 1 | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | ಲಾ 130 ಎಲ್‌ಎಜಿ 79, ದಿನಾಂಕ:07-10-1980 |
| 2. | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | ಲಾ 130 ಎಲ್‌ಎಜಿ 79, ದಿನಾಂಕ:07-10-1980 |
| 3 | ಸರ್ಕಾರಿ ಅಭಿಯೋಜಕರ ಕಛೇರಿ, ಬೆಂಗಳೂರು ನಗರ | ಲಾ 130 ಎಲ್‌ಎಜಿ 79, ದಿನಾಂಕ:07-10-1980 |
| 4 | ಸರ್ಕಾರಿ ಅಭಿಯೋಜಕರ ಕಛೇರಿ, ಬೆಂಗಳೂರು ನಗರ | ಲಾ 130 ಎಲ್‌ಎಜಿ 79, ದಿನಾಂಕ:07-10-1980 |
| 5 | ಸರ್ಕಾರಿ ಅಭಿಯೋಜಕರ ಕಛೇರಿ, ಬೆಂಗಳೂರು ಗ್ರಾಮಾಂತರ | ಲಾ 130 ಎಲ್‌ಎಜಿ 79, ದಿನಾಂಕ:07-10-1980 |
| 6 | ಸರ್ಕಾರಿ ಅಭಿಯೋಜಕರ ಕಛೇರಿ, ತುಮಕೂರು | ಲಾ 130 ಎಲ್‌ಎಜಿ 79, ದಿನಾಂಕ:07-10-1980 |

| | | |
|---|---|---|
| 7 | ಸರ್ಕಾರಿ ಅಭಿಯೋಜಕರ ಕಛೇರಿ, ಕೋಲಾರ | ಲಾ 130 ಎಲ್‌ಎಜಿ 79, ದಿನಾಂಕ:07-10-1980 |
| 8 | ಸರ್ಕಾರಿ ಅಭಿಯೋಜಕರ ಕಛೇರಿ, ಮೈಸೂರು | ಲಾ 130 ಎಲ್‌ಎಜಿ 79, ದಿನಾಂಕ:07-10-1980 |
| 9. | ಸರ್ಕಾರಿ ಅಭಿಯೋಜಕರ ಕಛೇರಿ, ಮಂಡ್ಯ | ಲಾ 130 ಎಲ್‌ಎಜಿ 79, ದಿನಾಂಕ:07-10-1980 |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ '2014-ನ್ಯಾಯಾಪರಿಪಾಲನೆ-00-114-ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು-0-02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು' ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಸರ್ಕಾರದ ಆದೇಶ ಸಂ:ಎಫ್‌ಡಿ 58 ಎಸ್‌ಆರ್‌ಎಸ್ 79, ದಿನಾಂಕ:27-09-1979ರ ಕಂಡಿಕೆ 2 (iii) ರನ್ವಯ ಹಾಗೂ ಆರ್ಥಿಕ ಇಲಾಖೆ ಟಿಪ್ಪಣಿ ಸಂ:ಆಇ 88 ವೆಚ್ಚ-11/2012, ದಿನಾಂಕ:09-05-2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1591

**ಹೆಚ್.ಕೆ.ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ,

(ಪೊಲೀಸ್ ಸೇವೆಗಳು-ಬಿ)

## ನಗರಾಭಿವೃದ್ಧಿ ಸಚಿವಾಲಯ

ವಿಷಯ : ಸಂಕೇಶ್ವರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ.2700.00 ಲಕ್ಷಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಒಳ ಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

ಓದಲಾಗಿದೆ : ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ:ಕಜಮಂ/ ಮುಅ(ಉ)/ಆಶ್ರೇಕಾಅ(ಬಿಜಿಎಂ)/ಉಮುಅ-1/ತಾ.ಸ.-2/ಸಅ-5/ಸಂಕೇಶ್ವರ.ಒ.ಚ.ಯೋ/ 3559/2011-12, ದಿ:22-01-2012.

**ಪ್ರಸ್ತಾವನೆ :**

ಸಂಕೇಶ್ವರ ಪಟ್ಟಣವು ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಪಟ್ಟಣವಾಗಿದ್ದು, 2001ರ ಜನಗಣತಿಯಂತೆ ಪಟ್ಟಣದ ಜನಸಂಖ್ಯೆಯು 32511 ಇದ್ದು ಪ್ರಸ್ತುತ 35000 ಇರುತ್ತದೆ, 2030ರ ಮಧ್ಯಂತರ ಅವಧಿಯಲ್ಲಿ 53,000 ಹಾಗೂ 2045ರಲ್ಲಿ 72,000 ಆಗಬಹುದೆಂದು ನಿರೀಕ್ಷಿಸಲಾಗಿದೆ. ಸಂಕೇಶ್ವರ ಪಟ್ಟಣಕ್ಕೆ ಪ್ರಸ್ತುತ ಘಟಪ್ರಭಾ ಮತ್ತು ಹಿರಣ್ಯಕೇಶಿ ನದಿಗಳಿಂದ ಹಾಗೂ ಪ್ರಾದೇಶಿಕ ನೀರು ಸರಬರಾಜು ಯೋಜನೆಯಡಿ ಹುಕ್ಕೇರಿ ಸಂಕೇಶ್ವರ ಹಾಗೂ ಮಾರ್ಗ ಮಧ್ಯದ 16 ಹಳ್ಳಿಗಳಿಗೆ ಘಟಪ್ರಭಾ ನದಿಯಿಂದ ನೀರು ಸರಬರಾಜು ಮಾಡಲಾಗುತ್ತಿದೆ. ಹಿರಣ್ಯಕೇಶಿ ನದಿಯಿಂದ ನೀರು ಸರಬರಾಜು ಯೋಜನೆಯನ್ನು 1971ರಲ್ಲಿ ಮತ್ತು ಘಟಪ್ರಭಾ ನದಿಯಿಂದ 1999ರಲ್ಲಿ ಅನುಷ್ಠಾನಗೊಳಿಸಲಾಗಿದೆ. ಈ ಯೋಜನೆಯಿಂದ ಪಟ್ಟಣಕ್ಕೆ 3.5 ಎಂ.ಜಿ.ಡಿ., ಮತ್ತು 0.75 ಎಂ.ಜಿ.ಡಿ. ನೀರನ್ನು ಸರಬರಾಜು ಮಾಡಲು ಅವಕಾಶ ಕಲ್ಪಿಸಲಾಗಿದೆ.

ಪ್ರಸ್ತುತ ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ, ಪಟ್ಟಣದ ಜನತೆಯು ಸೋಕ್ ಪಿಟ್‌ಗಳನ್ನು ಮತ್ತು ಸೆಪ್ಟಿಕ್ ಟ್ಯಾಂಕ್‌ಗಳನ್ನು ಉಪಯೋಗಿಸುತ್ತಿದ್ದು, ಮಲಿನ ನೀರನ್ನು ತೆರೆದ ಒಳಚರಂಡಿಗಳಿಗೆ ಹರಿಯಲು ಬಿಡುತ್ತಿದ್ದು, ಇದರಿಂದಾಗಿ ನೈರ್ಮಲ್ಯ ಸಮಸ್ಯೆ ಹಾಗೂ ಅಂತರ್ಜಲ ಮತ್ತು ಮೇಲ್ಮೈ ನೀರಿನ ಮೂಲ ಕಲುಷಿತಗೊಳ್ಳುತ್ತಿರುವುದರಿಂದ ಸಾರ್ವಜನಿಕರ ಆರೋಗ್ಯದ ಮೇಲೆ ದುಷ್ಪರಿಣಾಮವಾಗುವ ಸಾಧ್ಯತೆ ಇದೆ ಆದ್ದರಿಂದ ಒಳಚರಂಡಿ ಯೋಜನೆ ಕಲ್ಪಿಸುವುದು ಅವಶ್ಯಕವಾಗಿರುತ್ತದೆ. ಈ ಯೋಜನೆಯಡಿಯಲ್ಲಿ ಈ ಕೆಳಕಂಡ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಉದ್ದೇಶಿಸಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯವರು ಯೋಜನೆಯ ಆರ್ಥಿಕ ಮಾದರಿಯನ್ನು ಸರ್ಕಾರದ ಆದೇಶ ಸಂಖ್ಯೆ:ನಅಇ 07 ಯುಡಬ್ಲ್ಯೂಎಸ್ 2011, ದಿನಾಂಕ:20-07-2011ರಲ್ಲಿ ಹೊರಡಿಸಲಾದ ಹೊಸ ಆರ್ಥಿಕ ಮಾದರಿ ನಿಗದಿಪಡಿಸಿದಂತೆ ಸದರಿ ಪಟ್ಟಣವು ಪುರಸಭೆ ವ್ಯಾಪ್ತಿಯಲ್ಲಿ ಬರುವುದರಿಂದ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | |
|---|---|
| ಕರ್ನಾಟಕ ಸರ್ಕಾರದ ಅನುದಾನ (75%) | ರೂ. 2025.00 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ (20%) | ರೂ. 540.00 ಲಕ್ಷಗಳು |
| ಪುರಸಭೆಯ ಪಾಲು (05%) | ರೂ. 135.00 ಲಕ್ಷಗಳು |
| ಒಟ್ಟು | ರೂ.2700.00 ಲಕ್ಷಗಳು |

ಈ ಯೋಜನೆಯನ್ನು ಮಂಡಳಿಯ 2011-12ನೇ ಸಾಲಿನ ಅನುಮೋದಿತ ಕ್ರಿಯಾಯೋಜನೆಯಲ್ಲಿ ಸೇರಿಸಿ ರೂ.900.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಯೋಜನೆಯಲ್ಲಿನ ಇಟಿಪಿ ಮತ್ತು ಸಾಧಿಲ್ವಾರು ವೆಚ್ಚಗಳನ್ನು ಶೇಕಡ 5ಕ್ಕೆ ಮಿತಿಗೊಳಿಸಲು ಯೋಜನೆಯ ಮೂಲ ಅಂದಾಜು ಮೊತ್ತವಾದ ರೂ.1886.10 ಲಕ್ಷಗಳಿಗೆ ಶೇಕಡ 5ರಂತೆ ಇಟಿಪಿ ಮತ್ತು ಸಾಧಿಲ್ವಾರು ವೆಚ್ಚಗಳಾದ ರೂ.94.31 ಲಕ್ಷಗಳನ್ನು ಇತರೆ ವೆಚ್ಚಗಳಾದ ರೂ.0.59 ಲಕ್ಷಗಳು ಸೇರಿಸಿ ಯೋಜನೆಯ ಅಂದಾಜನ್ನು ರೂ.1981.00 ಲಕ್ಷಗಳಿಗೆ ಮಿತಿಗೊಳಿಸಬೇಕಾಗಿರುತ್ತದೆ. ಇದಲ್ಲದೆ ಯೋಜನೆಯಡಿಯಲ್ಲಿ ಕಾಮಗಾರಿಗಳ ಪ್ರಗತಿಯಲ್ಲಿ

ಉದ್ಭವಿಸಬಹುದಾದ ಏಸ್ಕಲೇಷನ್ ಮತ್ತು ಟೆಂಡರ್ ಪ್ರೀಮಿಯಂ ದರಗಳನ್ನು ಸ್ಥಳೀಯ ಸಂಸ್ಥೆಯೇ ಭರಿಸಲು ಒಪ್ಪಿರುವುದರಿಂದ ಈ ಮೊತ್ತವನ್ನು ಯೋಜನೆಯ ಅಂದಾಜಿನಿಂದ ಕೈಬಿಡಲಾಗಿದೆ.

ಸದರಿ ಯೋಜನೆಯ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 03 ಯುಡಿಎಸ್ 2012 ಬೆಂಗಳೂರು, ದಿನಾಂಕ: 05ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಂಕೇಶ್ವರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ.1981.00 ಲಕ್ಷಗಳಲ್ಲಿ (ರೂ.ಒಂದು ಸಾವಿರದ ಒಂಭೈನೂರ ಎಂಬತ್ತೊಂದು ಲಕ್ಷಗಳು ಮಾತ್ರ) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು **ಒಳಚರಂಡಿ ಯೋಜನೆಯಡಿ** ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) The Escalation charges should not form part of the estimate. It should be borne by the concerned ULB. The estimate is reduced to such extent.
2) The board shall invite the tender immediately after the handing over the land required under the scheme in order to avoid time and cost run over.
3) Adequate provision to be made by the Board in the following Years for timely completion of the Project.
4) Escalation and Tender premium should be borne by the ULB.
5) Water rates as proposed by KUWS&DB have to be implemented to meet ) O & M cost of UGD.
6) KTPP provisions, quality control and timely completion should be ensured.
7) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
8) ಸದರಿ ಕಾಮಗಾರಿಯನ್ನು ನಿಗಧಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.
9) ಸರ್ಕಾರವು ಯೋಜನೆಯ ಆರ್ಥಿಕ ಮಾದರಿಯನ್ನು ಬದಲಾಯಿಸಿ ಆದೇಶ ಹೊರಡಿಸಿರುವ ಹಿನ್ನಲೆಯಲ್ಲಿ ಯೋಜನೆಗಳ ಆರ್ಥಿಕ ಮಾದರಿಗಳನ್ವಯ ರಾಜ್ಯಸರ್ಕಾರದಿಂದ ಬಿಡುಗಡೆಯಾಗುವ ಅನುದಾನವನ್ನು/ಸಾಲವನ್ನು ಯೋಜನಾ ಆರ್ಥಿಕ ಮಾದರಿಗಳಂತೆ ಸೂಕ್ತವಾಗಿ ಮಾರ್ಪಡಿಸಲು ಸೂಕ್ತ ಕ್ರಮವನ್ನು ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ ಕ್ರಮ ಕೈಗೊಳ್ಳತಕ್ಕದ್ದು ಈ ನಿಟ್ಟಿನಲ್ಲಿ ಅಗತ್ಯವಿದ್ದರೆ ಲೆಕ್ಕಶೀರ್ಷಿಕೆಗಳ ಮರು ಹೊಂದಾಣಿಕೆಯನ್ನು ಸದರಿ ಇಲಾಖೆಯೊಂದಿಗೆ ವ್ಯವಹರಿಸಿ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 122 Exp-9:2011, ದಿನಾಂಕ:09–04–2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1592

**ಟಿ.ಎಂ.ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

ವಿಷಯ : ಕೂಡ್ಲಿಗಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ.3154.00 ಲಕ್ಷಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಒಳ ಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

ಓದಲಾಗಿದೆ : ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ:ಕಜಮಂ/ಮುಅ(ಉ)/ಆಶ್ರೇಕಾಅ (ಗು)/ಉಮುಅ–2/ತಾ.ಸ.–1/ಸಅ–4/ 3561 / 2011–12, ದಿ:25–01–2012.

**ಪ್ರಸ್ತಾವನೆ :**

ಕೂಡ್ಲಿಗಿ ಪಟ್ಟಣವು ಬಳ್ಳಾರಿ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, 2001ರ ಜನಗಣತಿಯಂತೆ ಪಟ್ಟಣದ ಜನಸಂಖ್ಯೆಯು 21849 ಇದ್ದು ಪ್ರಸ್ತುತ ಜನಸಂಖ್ಯೆ 25,000 ಇರುತ್ತದೆ. ಹಾಲಿ ಈ ಪಟ್ಟಣಕ್ಕೆ ತುಂಗಭದ್ರಾ ನದಿಯಿಂದ ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ಮತ್ತು ಕೊಟ್ಟೂರು ಪಟ್ಟಣಗಳಿಗೆ ಸಂಯುಕ್ತ ನೀರು ಸರಬರಾಜು ಯೋಜನೆಯನ್ನು ಸದರಿ ಪಟ್ಟಣಗಳ ಜನಸಂಖ್ಯೆಯು 2016ರಲ್ಲಿ 95000 ಮತ್ತು 2031ರಲ್ಲಿ 1,31,000 ಆಗಬಹುದೆಂದು ಅಂದಾಜಿಸಿ ತಲಾ ದಿನಂ ಪ್ರತಿ 70 ಎಲ್.ಪಿ.ಸಿ.ಡಿ. ನೀರನ್ನು ಒದಗಿಸಲು ಯೋಜನೆ ರೂಪಿಸಿ, 2007ರಲ್ಲಿ ಚಾಲನೆಗೊಳಿಸಲಾಗಿದೆ. ಪ್ರಸ್ತುತ ಕೂಡ್ಲಿಗಿ ಪಟ್ಟಣಕ್ಕೆ 5.45 ಎಂ.ಎಲ್.ಡಿ. ನೀರನ್ನು ಅಂದರೆ 2.51 ಎಂ.ಎಲ್.ಡಿ. ಮೇಲಿನ ಯೋಜನೆಯಿಂದ ಮತ್ತು 2.94 ಎಂ.ಎಲ್.ಡಿ. ಕೊಳವೆ ಬಾವಿಗಳ ಮೂಲದಿಂದ ಒಟ್ಟು ಸೇರಿ ತಲಾ ದಿನಂ ಪ್ರತಿ 135 ಲೀಟರ್ ನೀರು ಸರಬರಾಜು ಮಾಡಲಾಗುತ್ತದೆ.

ಈ ಪಟ್ಟಣಕ್ಕೆ ಪ್ರಸ್ತುತ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ. ಹೆಚ್ಚಿನ ಮನೆಯವರು ಸೋಕ್ ಪಿಟ್, ಸೆಪ್ಟಿಕ್ ಟ್ಯಾಂಕ್ ಇತ್ಯಾದಿ ವ್ಯವಸ್ಥೆಗಳನ್ನು ಮಾಡಿಕೊಂಡಿರುತ್ತಾರೆ. ಮತ್ತು ಕೆಲವು ಪ್ರದೇಶಗಲ್ಲಿ ಮಲಿನ ನೀರನ್ನು ತೆರೆದ ಚರಂಡಿಗೆ ಹರಿಯಲು ಬಿಡುತ್ತಿದ್ದು, ಇದರಿಂದ ಮೇಲ್ಮೈ ಜಲಮೂಲ ಹಾಗೂ ಅಂತರ್ ಜಲ ನೀರು ಕಲುಷಿತಗೊಳ್ಳುತ್ತಿದ್ದು ಸಾರ್ವಜನಿಕರ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗುತ್ತಿದೆ. ಆದ್ದರಿಂದ ಶಾಶ್ವತ ಪರಿಹಾರಕ್ಕಾಗಿ ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವುದು ಅವಶ್ಯವಾಗಿರುತ್ತದೆ. ಆದ್ದರಿಂದ ಶಾಶ್ವತ ಪರಿಹಾರಕ್ಕಾಗಿ ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ

ಕಲ್ಪಿಸುವುದು ಅವಶ್ಯವಾಗಿರತ್ತದೆ. ಈ ಯೋಜನೆಯನ್ನು 2030ರಲ್ಲಿ 42738 ಹಾಗೂ 2045ರಲ್ಲಿ 60204 ಜನಸಂಖ್ಯೆಯನ್ನು ನಿರೀಕ್ಷಿಸಿ ಯೋಜನೆಯನ್ನು ರೂಪಿಸಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ಯೋಜನೆಯ ಆರ್ಥಿಕ ಮಾದರಿಯನ್ನು ಸರ್ಕಾರದ ಆದೇಶ ಸಂಖ್ಯೆ:ನಅಇ 07 ಯುಡಬ್ಲ್ಯೂಎಸ್ 2011, ದಿನಾಂಕ:20–07–2011ರಲ್ಲಿ ಹೊರಡಿಸಲಾದ ಹೊಸ ಆರ್ಥಿಕ ಮಾದರಿ ನಿಗದಿಪಡಿಸಿದಂತೆ ಈ ಕೆಳಕಂಡ ಆರ್ಥಿಕ ಮಾದರಿಯಂತೆ ಆಡಳಿತಾತ್ಮಕ ಅನುಮೋದನೆಯನ್ನು ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | | |
|---|---|---|
| ಕರ್ನಾಟಕ ಸರ್ಕಾರದ ಅನುದಾನ (95%) | | ರೂ. 2996.30 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ಕೊಡುಗೆ (05%) | | ರೂ. 157.70 ಲಕ್ಷಗಳು |
| | ಒಟ್ಟು | ರೂ. 3154.00 ಲಕ್ಷಗಳು |

ಈ ಯೋಜನೆಯನ್ನು ಮಂಡಳಿಯ 2011–12ನೇ ಸಾಲಿನ ಅನುಮೋದಿತ ಕ್ರಿಯಾಯೋಜನೆಯಲ್ಲಿ ಸೇರಿಸಿ ರೂ.1000.00 ಲಕ್ಷಗಳನ್ನು ಒದಗಿಸಲಾಗಿದೆ.

ಯೋಜನೆಯಲ್ಲಿ ಇಟಿಪಿ ಮತ್ತು ಸಾಧಿಲ್ವಾರು ವೆಚ್ಚಗಳನ್ನು ಶೇಕಡ 5ಕ್ಕೆ ಮಿತಿಗೊಳಿಸಲು ಯೋಜನೆಯ ಮೂಲ ಅಂದಾಜು ಮೊತ್ತವಾದ ರೂ.2377.85 ಲಕ್ಷಗಳಿಗೆ ಶೇಕಡ 5ರಂತೆ ಇಟಿಪಿ ಮತ್ತು ಸಾಧಿಲ್ವಾರು ವೆಚ್ಚಗಳಾದ ರೂ.119.00 ಲಕ್ಷಗಳನ್ನು ಠೇವಣಿ ಮೊತ್ತವಾದ ರೂ. 10.00 ಲಕ್ಷಗಳನ್ನು ಇತರೆ ವೆಚ್ಚಗಳಾದ ರೂ.0.15 ಲಕ್ಷಗಳು ಸೇರಿಸಿ ಯೋಜನೆಯ ಅಂದಾಜನ್ನು ರೂ.2507.00 ಲಕ್ಷಗಳಿಗೆ ಮಿತಿಗೊಳಿಸಬೇಕಾಗಿರುತ್ತದೆ. ಇದಲ್ಲದೆ ಯೋಜನೆಯಡಿಯಲ್ಲಿ ಕಾಮಗಾರಿಗಳ ಪ್ರಗತಿಯಲ್ಲಿ ಉದ್ಭವಿಸಬಹುದಾದ ಎಸ್ಕಲೇಷನ್ ಮತ್ತು ಟೆಂಡರ್ ಪ್ರೀಮಿಯಂ ದರಗಳನ್ನು ಸ್ಥಳೀಯ ಸಂಸ್ಥೆಯೇ ಭರಿಸಲು ಒಪ್ಪಿರುವುದರಿಂದ ಈ ಮೊತ್ತವನ್ನು ಯೋಜನೆಯ ಅಂದಾಜಿನಿಂದ ಕೈಬಿಡಲಾಗಿದೆ. ಇದಲ್ಲದೆ ಯೋಜನೆಯಡಿಯಲ್ಲಿ ಅಗತ್ಯವಿರುವ ಭೂಮಿಯನ್ನು ಸ್ಥಳೀಯ ಸಂಸ್ಥೆಯೇ ಒದಗಿಸಬೇಕಾಗಿರುವುದರಿಂದ ಸದರಿ ಜಾಗವನ್ನು ಸ್ಥಳೀಯ ಸಂಸ್ಥೆ ಒದಗಿಸಿದ ನಂತರ ಯೋಜನೆಯ ಟೆಂಡರ್ ಗಳನ್ನು ಕರೆಯಲು ಮಂಡಳಿ ಕ್ರಮ ವಹಿಸಬೇಕಾಗಿದೆ.

ಸದರಿ ಯೋಜನೆಯ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 22 ಯುಡಿಎಸ್ 2011 ಬೆಂಗಳೂರು, ದಿನಾಂಕ: 05ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕೂಡ್ಲಿಗಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ.2507.00 ಲಕ್ಷಗಳನ್ನು (ರೂ.ಎರಡು ಸಾವಿರದ ಐದುನೂರ ಏಳು ಲಕ್ಷಗಳು ಮಾತ್ರ) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು **ಒಳಚರಂಡಿ ಯೋಜನೆಯಡಿ** ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುದಮೋದನೆಯನ್ನು ನೀಡಿದೆ.

1) The Escalation charges should not form part of the estimate. It should be borne by the concerned ULB. The estimate is reduced to such extent.
2) The board shall invite the tender immediately after the handing over the land required under the scheme in order to avoid time and cost run over.
3) Adequate provision to be made by the Board in the following Years for timely completion of the Project.
4) Escalation and Tender premium should be borne by the ULB.
5) Water rates as proposed by KUWS&DB have to be implemented to meet O & M cost of UGD.
6) KTPP provisions, quality control and timely completion should be ensured.
7) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
8) ಸದರಿ ಕಾಮಗಾರಿಯನ್ನು ನಿಗಧಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.
9) ಸರ್ಕಾರವು ಯೋಜನೆಯ ಆರ್ಥಿಕ ಮಾದರಿಯನ್ನು ಬದಲಾಯಿಸಿ ಆದೇಶ ಹೊರಡಿಸಿರುವ ಹಿನ್ನಲೆಯಲ್ಲಿ ಯೋಜನೆಗಳ ಆರ್ಥಿಕ ಮಾದರಿಗಳನ್ವಯ ರಾಜ್ಯಸರ್ಕಾರದಿಂದ ಬಿಡುಗಡೆಯಾಗುವ ಅನುದಾನವನ್ನು/ಸಾಲವನ್ನು ಯೋಜನಾ ಆರ್ಥಿಕ ಮಾದರಿಗಳಂತೆ ಸೂಕ್ತವಾಗಿ ಮಾರ್ಪಡಿಸಲು ಸೂಕ್ತ ಕ್ರಮವನ್ನು ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ ಕ್ರಮ ಕೈಗೊಳ್ಳತಕ್ಕದ್ದು ಈ ನಿಟ್ಟಿನಲ್ಲಿ ಅಗತ್ಯವಿದ್ದರೆ ಲೆಕ್ಕಶೀರ್ಷಿಕೆಗಳ ಮರು ಹೊಂದಾಣಿಕೆಯನ್ನು ಸದರಿ ಇಲಾಖೆಯೊಂದಿಗೆ ವ್ಯವಹರಿಸಿ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 168 Exp-9:2011, ದಿನಾಂಕ:09–04–2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1593

**ಟಿ.ಎಂ.ವಾಸುದೇವರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

ವಿಷಯ : ಹುಕ್ಕೇರಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ.1900.00 ಲಕ್ಷಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

ಓದಲಾಗಿದೆ : ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ:ಕಜಮಂ/ಮುಅ(ಉ)/ಆಶ್ರೇಕಾಅ(ಬಿಜಿಎಂ)/ಉಮುಅ–1/ತಾ.ಸ.–2/ಸಅ5/ಹುಕ್ಕೇರಿ.ಒ.ಚ.ಯೋ /3562/2011–12, ದಿ:25–01–2012.

**ಪ್ರಸ್ತಾವನೆ :**

ಹುಕ್ಕೇರಿ ಪಟ್ಟಣವು ಬೆಳಗಾಂ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, 2001ರ ಜನಗಣತಿಯಂತೆ ಪಟ್ಟಣದ ಜನಸಂಖ್ಯೆಯು 19906 ಇದ್ದು ಪ್ರಸ್ತುತ 21000 ಇರುತ್ತದೆ, 2030ರ ಮಧ್ಯಂತರ ಅವಧಿಯಲ್ಲಿ 31,500 ಹಾಗೂ 2045ರಲ್ಲಿ 42,000 ಆಗಬಹುದೆಂದು ನಿರೀಕ್ಷಿಸಲಾಗಿದೆ. ಹುಕ್ಕೇರಿ ಪಟ್ಟಣಕ್ಕೆ ಪ್ರಸ್ತುತ ಪ್ರಾದೇಶಿಕ ನೀರು ಸರಬರಾಜು ಯೋಜನೆಯಾದ ಹುಕ್ಕೇರಿ ಸಂಕೇಶ್ವರ ಹಾಗೂ ಮಾರ್ಗದ ಮಧ್ಯದ 16 ಹಳ್ಳಿಗಳಿಗೆ ಘಟಪ್ರಬಾ ನದಿಯಿಂದ ನೀರು ಸರಬರಾಜು ಮಾಡುತ್ತಿದ್ದು, ಈ ಯೋಜನೆಯನ್ನು 1999ರಲ್ಲಿ ಚಾಲ್ತಿಗೊಳಿಸಿ ಅನುಷ್ಠಾನಗೊಳಿಸಲಾಗಿದೆ. ಈ ಯೋಜನೆಯಿಂದ ಪಟ್ಟಣಕ್ಕೆ 0.75 ಎಂ.ಜಿ.ಡಿ., ನೀರನ್ನು ಸರಬರಾಜು ಮಾಡಲು ಅವಕಾಶ ಕಲ್ಪಿಸಲಾಗಿದೆ.

ಪ್ರಸ್ತುತ ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ, ಪಟ್ಟಣದ ಜನತೆಯ ಸೋಕ್ ಪಿಟ್‌ಗಳನ್ನು ಮತ್ತು ಸೆಪ್ಟಿಕ್ ಟ್ಯಾಂಕ್‌ಗಳನ್ನು ಉಪಯೋಗಿಸುತ್ತಿದ್ದು, ಮಲಿನ ನೀರನ್ನು ತೆರೆದ ಒಳಚರಂಡಿಗಳಿಗೆ ಹರಿಯಲು ಬಿಡುತ್ತಿದ್ದು, ಇದರಿಂದಾಗಿ ನೈರ್ಮಲ್ಯ ಸಮಸ್ಯೆ ಹಾಗೂ ಅಂತರ್ಜಲ ಮತ್ತು ಮೇಲ್ಮೈ ನೀರಿನ ಮೂಲ ಕಲುಷಿತಗೊಳ್ಳುತ್ತಿರುವುದರಿಂದ ಸಾರ್ವಜನಿಕರ ಆರೋಗ್ಯದ ಮೇಲೆ ದುಷ್ಪರಿಣಾಮವಾಗುವ ಸಾಧ್ಯತೆ ಇದೆ ಆದ್ದರಿಂದ ಒಳಚರಂಡಿ ಯೋಜನೆ ಕಲ್ಪಿಸುವುದು ಅವಶ್ಯಕವಾಗಿರುತ್ತದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು ಯೋಜನೆಯ ಆರ್ಥಿಕ ಮಾದರಿಯನ್ನು ಸರ್ಕಾರದ ಆದೇಶ ಸಂಖ್ಯೆ:ನಅಇ 07 ಯುಡಬ್ಲ್ಯೂಎಸ್ 2011, ದಿನಾಂಕ:20–07–2011ರಲ್ಲಿ ಹೊರಡಿಸಲಾದ ಹೊಸ ಆರ್ಥಿಕ ಮಾದರಿ ನಿಗದಿಪಡಿಸಿದಂತೆ ಸದರಿ ಪಟ್ಟಣವು ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವುದರಿಂದ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | |
|---|---|
| ಕರ್ನಾಟಕ ಸರ್ಕಾರದ ಅನುದಾನ (95%) | ರೂ. 1805.00 ಲಕ್ಷಗಳು |
| ಪುರಸಭೆಯ ಪಾಲು (05%) | ರೂ. 95.00 ಲಕ್ಷಗಳು |
| ಒಟ್ಟು | ರೂ. 1900.00 ಲಕ್ಷಗಳು |

ಈ ಯೋಜನೆಯನ್ನು ಮಂಡಳಿಯ 2011–12ನೇ ಸಾಲಿನ ಅನುಮೋದಿತ ಕ್ರಿಯಾಯೋಜನೆಯಲ್ಲಿ ಸೇರಿಸಿ ರೂ.634.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಯೋಜನೆಯಲ್ಲಿ ಇಟಿಪಿ ಮತ್ತು ಸಾಧಿಲ್ವಾರು ವೆಚ್ಚಗಳನ್ನು ಶೇಕಡ 5ಕ್ಕೆ ಮಿತಿಗೊಳಿಸಲು ಯೋಜನೆಯ ಮೂಲ ಅಂದಾಜು ಮೊತ್ತವಾದ ರೂ.1304.64 ಲಕ್ಷಗಳಿಗೆ ಶೇಕಡ 5ರಂತೆ ಇಟಿಪಿ ಮತ್ತು ಸಾಧಿಲ್ವಾರು ವೆಚ್ಚಗಳಾದ ರೂ.65.21 ಲಕ್ಷಗಳನ್ನು ಇತರೆ ವೆಚ್ಚಗಳಾದ ರೂ.0.15 ಲಕ್ಷಗಳು ಸೇರಿಸಿ ಯೋಜನೆಯ ಅಂದಾಜನ್ನು ರೂ.1370.00 ಲಕ್ಷಗಳಿಗೆ ಮಿತಿಗೊಳಿಸಬೇಕಾಗಿರುತ್ತದೆ. ಯೋಜನೆಯಡಿಯಲ್ಲಿ ಕಾಮಗಾರಿಗಳ ಪ್ರಗತಿಯಲ್ಲಿ ಉದ್ಭವಿಸಬಹುದಾದ ಏಸ್ಕಲೇಷನ್ ಮತ್ತು ಟೆಂಡರ್ ಪ್ರೀಮಿಯಂ ದರಗಳನ್ನು ಸ್ಥಳೀಯ ಸಂಸ್ಥೆಯೇ ಭರಿಸಲು ಒಪ್ಪಿರುವುದರಿಂದ ಈ ಮೊತ್ತವನ್ನು ಯೋಜನೆಯ ಅಂದಾಜಿನಿಂದ ಕೈಬಿಡಲಾಗಿದೆ. ಈ ಹಿನ್ನಲೆಯಲ್ಲಿ ಯೋಜನೆಯ ಅಂದಾಜನ್ನು ರೂ.1900.00 ಲಕ್ಷಗಳಿಂದ ರೂ. 1370.00 ಲಕ್ಷಗಳಿಗೆ ಮಿತಿಗೊಳಿಸಲಾಗಿದೆ.

ಸದರಿ ಯೋಜನೆಯ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 02 ಯುಡಿಎಸ್ 2012 ಬೆಂಗಳೂರು, ದಿನಾಂಕ: 05ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಹುಕ್ಕೇರಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ.1370.00 ಲಕ್ಷಗಳಲ್ಲಿ (ರೂ.ಒಂದು ಸಾವಿರದ ಮೂನ್ನೂರ ಎಪ್ಪತ್ತು ಲಕ್ಷಗಳು ಮಾತ್ರ) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು **ಒಳಚರಂಡಿ ಯೋಜನೆಯಡಿ** ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) The Escalation charges should not form part of the estimate. It should be borne by the concerned ULB. The estimate is reduced to such extent.
2) The board shall invite the tender immediately after the handing over of the land required under the scheme in order to avoid time and cost run over.
3) Adequate provision to be made by the Board in the following Years for timely completion of the Project.
4) Escalation and Tender premium should be borne by the ULB.

5) Water rates as proposed by KUWS&DB have to be implemented to meet O & M cost of UGD

6) KTPP provisions, quality control and timely completion should be ensured.

7) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

8) ಸದರಿ ಕಾಮಗಾರಿಯನ್ನು ನಿಗಧಿತ ಅವಧಿಯ ಒಳಗೆ ಪೂರ್ಣಗೊಳಿಸುವುದು

9) ಸರ್ಕಾರವು ಯೋಜನೆಯ ಆರ್ಥಿಕ ಮಾದರಿಯನ್ನು ಬದಲಾಯಿಸಿ ಆದೇಶ ಹೊರಡಿಸಿರುವ ಹಿನ್ನಲೆಯಲ್ಲಿ ಯೋಜನೆಗಳ ಆರ್ಥಿಕ ಮಾದರಿಗಳನ್ವಯ ರಾಜ್ಯಸರ್ಕಾರದಿಂದ ಬಿಡುಗಡೆಯಾಗುವ ಅನುದಾನವನ್ನು/ಸಾಲವನ್ನು ಯೋಜನಾ ಆರ್ಥಿಕ ಮಾದರಿಗಳಂತೆ ಸೂಕ್ತವಾಗಿ ಮಾರ್ಪಡಿಸಲು ಸೂಕ್ತ ಕ್ರಮವನ್ನು ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ ಕ್ರಮ ಕೈಗೊಳ್ಳತಕ್ಕದ್ದು ಈ ನಿಟ್ಟಿನಲ್ಲಿ ಅಗತ್ಯವಿದ್ದರೆ ಲೆಕ್ಕಶೀರ್ಷಿಕೆಗಳ ಮರು ಹೊಂದಾಣಿಕೆಯನ್ನು ಸದರಿ ಇಲಾಖೆಯೊಂದಿಗೆ ವ್ಯವಹರಿಸಿ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 121 Exp-9:2011, ದಿನಾಂಕ:09–04–2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1594

**ಟಿ.ಎಂ.ವಾಸುದೇವರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## ಸಹಕಾರ ಸಚಿವಾಲಯ

ವಿಷಯ : ಆರ್ಯವಿದ್ಯಾ ಶಾಲಾ ಪೇರೆಂಟ್ಸ್ ಅಸೋಸಿಯೇಷನ್ ಗಾಂಧಿನಗರ, ಬೆಂಗಳೂರು ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ.

ಓದಲಾಗಿದೆ : ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು) ಹಾಗೂ ವಿಚಾರಣಾಧಿಕಾರಿಗಳು ಆರ್ಯವಿದ್ಯಾ ಪೇರೆಂಟ್ಸ್ ಅಸೋಸಿಯೇಷನ್ ಬೆಂಗಳೂರು ಇವರ ಪತ್ರ ಸಂಖ್ಯೆ : ಆರ್‌ಸಿಎಸ್ : ಸಿಆರ್‌ಡಿ : ಎ–12 / 2011–12 ದಿನಾಂಕ : 19–11–2011.

**ಪ್ರಸ್ತಾವನೆ :**

ಬೆಂಗಳೂರಿನ ಆರ್ಯವಿದ್ಯಾಶಾಲಾ ಪೇರೆಂಟ್ಸ್ ಅಸೋಸಿಯೇಷನ್ ಗಾಂಧೀನಗರ ಈ ಸಂಸ್ಥೆಯ ಕುರಿತಂತೆ ಹಲವಾರು ದೂರುಗಳು ಸ್ವೀಕೃತವಾದ ಹಿನ್ನಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 25 ರಡಿ ಶಾಸನಬದ್ಧ ವಿಚಾರಣೆಯನ್ನು ಸಹಕಾರ ಸಂಘಗಳ ಅಪರ ನಿಬಂಧಕರು ಮತ್ತು ವಿಚಾರಣಾಧಿಕಾರಿಗಳು ವಿಚಾರಣೆ ಮಾಡಿ ವಿಚಾರಣಾ ವರದಿಯನ್ನು ದಿನಾಂಕ : 19–11–2011 ರಂದು ಸಲ್ಲಿಸಿದ್ದಾರೆ. ಈ ಆರೋಪಗಳನ್ನು ವಿಚಾರಣಾಧಿಕಾರಿಗಳು ಪರಿಶೀಲನೆ ಮಾಡಿ ಈ ಕೆಳಕಂಡಂತೆ ಅಭಿಪ್ರಾಯ ಪಟ್ಟಿರುತ್ತಾರೆ.

> "ಸಂಸ್ಥೆಯು ಕಾಲಕಾಲಕ್ಕೆ ವಾರ್ಷಿಕ ಮಹಾಸಭೆ ನಡೆಸಿರುವುದಿಲ್ಲ. ಸದಸ್ಯರುಗಳ ಪಟ್ಟಿಯನ್ನು ಪ್ರತಿ ವರ್ಷ ನೋಂದಣಾಧಿಕಾರಿಗಳಿಗೆ ಸಲ್ಲಿಸಿರುವುದಿಲ್ಲ. ಆಡಳಿತ ಮಂಡಳಿಯ ಸದಸ್ಯರ ಪಟ್ಟಿಯೊಂದಿಗೆ ವಾರ್ಷಿಕ ಲೆಕ್ಕಪತ್ರ ತಃಖ್ತೆಗಳನ್ನು 2004 ರಿಂದ 2010 ರವರೆಗೂ ಅನುಮತಿಗಾಗಿ ನೋಂದಣಾಧಿಕಾರಿಗಳಿಗೆ ಸಲ್ಲಿಸಿರುವುದಿಲ್ಲ. ಪೋಷಕರ ಹೆಸರಿನಲ್ಲಿ ಇತರೆ ವ್ಯಕ್ತಿಗಳು ಸದಸ್ಯತ್ವ ಪಡೆದು ಆಡಳಿತ ಮಂಡಳಿಗೆ ಸೇರಿಕೊಂಡಿರುವುದು ತಿಳಿದು ಬರುತ್ತದೆ. ಈ ಸಂಸ್ಥೆಯು ತನ್ನ ಬೈಲಾ ಹಾಗೂ ನಿಯಮಗಳ ರೀತ್ಯಾ ಕೆಲಸ ನಿರ್ವಹಿಸುತ್ತಿರುವುದಿಲ್ಲ ಮತ್ತು ಬೈಲಾ ಹಾಗೂ ಕಾಯ್ದೆ ನಿಯಮಗಳ ಸ್ಪಷ್ಟ ಉಲ್ಲಂಘನೆಯಾಗಿರುತ್ತದೆ. ಆಡಳಿತ ಮಂಡಳಿ ಸದಸ್ಯರು ಸಂಸ್ಥೆಯಲ್ಲಿ ಕಾನೂನು ಹಾಗೂ ನಿಯಮಗಳನ್ವಯ ನಡೆಸಲು ವಿಫಲರಾಗಿರುವುದು ಸ್ಪಷ್ಟವಾಗಿರುತ್ತದೆ. ಮೇಲ್ಕಂಡ ಸಮರ್ಥನೀಯ ಅಂಶಗಳನ್ನು ಗಮನಿಸಿ ಈ ಸಂಸ್ಥೆಯ ಆಡಳಿತ ಮಂಡಳಿಯನ್ನು ರದ್ದುಗೊಳಿಸಿ ಇದರ ಆಸ್ತಿಯನ್ನು ಕರ್ನಾಟಕ ಸರ್ಕಾರದ ಶಿಕ್ಷಣ ಇಲಾಖೆಗೆ ವರ್ಗಾಯಿಸುವುದು ಸೂಕ್ತವಾಗಿರುತ್ತದೆಂದು ಅಭಿಪ್ರಾಯ ಪಡಲಾಗಿದೆ."

ವಿಚಾರಣಾ ವರದಿಯನ್ವಯ ಸದರಿ ಸಂಸ್ಥೆಯ ಹಿತದೃಷ್ಟಿಯಿಂದ ಮತ್ತು ಸಂಸ್ಥೆಯಲ್ಲಿ ವ್ಯಾಸಂಗ ಮಾಡುತ್ತಿರುವ ಮಕ್ಕಳ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ನ್ಯಾಯಯುತ ಸಮಗ್ರ ತನಿಖೆ ನಡೆಸುವುದು ಅವಶ್ಯಕವಿರುವುದರಿಂದ ಹಾಗೂ ಸಂಸ್ಥೆಯ ಪದಾಧಿಕಾರಿಗಳೇ ಸಂಸ್ಥೆಯ ಆಡಳಿತವನ್ನು ನಡೆಸುತ್ತಿರುವುದರಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 (ಎ) ರನ್ವಯ ಹಾಲಿ ಆಡಳಿತ ಮಂಡಳಿಯನ್ನು ವಜಾಗೊಳಿಸಿ ಈ ಸಂಸ್ಥೆಗೆ ಜಿಲ್ಲಾಧಿಕಾರಿ ಬೆಂಗಳೂರು ನಗರ ಜಿಲ್ಲೆ ಇವರನ್ನು ಆಡಳಿತಾಧಿಕಾರಿಗಳನ್ನಾಗಿ ನೇಮಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಇ : 30 ಸಸಂನೋ 2012, ಬೆಂಗಳೂರು, ದಿನಾಂಕ: 7ನೇ ಜೂನ್ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆರ್ಯವಿದ್ಯಾಶಾಲಾ ಫೇರೆಂಟ್ಸ್ ಅಸೋಸಿಯೇಷನ್ ಗಾಂಧಿನಗರ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27–ಎ ರನ್ವಯ, ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ನಗರ ಜಿಲ್ಲೆಯ ಜಿಲ್ಲಾಧಿಕಾರಿಗಳನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಹಾಲಿ ಇರುವ ಸದಸ್ಯರಿಂದ ಸಂಘಕ್ಕೆ ಚುನಾವಣೆಯನ್ನು ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಆರು (06) ತಿಂಗಳ ಅವಧಿಗೆ ಇದರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ನೇಮಿಸಿದೆ. ಸದರಿ ಅವಧಿಯಲ್ಲಿ ಸಂಘದಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಕುರಿತು ಸಮಗ್ರ ತನಿಖೆ ನಡೆಸಿ ಸರ್ಕಾರಕ್ಕೆ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1629

**ಎ.ಎಸ್. ವಿಶ್ವೇಶ್ವರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

ವಿಷಯ : ದಿ. ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ, ಬೆಂಗಳೂರು, ಇದರ 2009-10 ಮತ್ತು 2010-11ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಧಿ ವಿಸ್ತರಿಸುವ ಬಗ್ಗೆ.

ಓದಲಾಗಿದೆ : 1. ಸರ್ಕಾರದ ಆದೇಶ ಸಂಖ್ಯೆ : ಸಿಓ 28 ಸಿಎಲ್ಎಂ 2011, ದಿನಾಂಕ : 22-02-2011.

2. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಹೆಚ್ಎಸ್‌ಜಿ-2 : 396 : ಹೆಚ್‌ಹೆಚ್ಎಸ್ 2011-12, ದಿನಾಂಕ : 24-03-2012, ದಿನಾಂಕ : 10-04-2012.

ಪ್ರಸ್ತಾವನೆ :

ದಿ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮಲ್ಲೇಶ್ವರಂ, ಬೆಂಗಳೂರು ಈ ಸಂಘದ 2009-10 ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ : 31-03-2012ರೊಳಗಾಗಿ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪ ಬಂಧಗಳನ್ನು ಮಾರ್ಪಡಿಸಿ ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರದ ಆದೇಶದಲ್ಲಿ ಅನುಮತಿಯನ್ನು ನೀಡಲಾಗಿದೆ.

ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರು ಮೇಲೆ ಓದಲಾದ ಕ್ರಮಾಂಕ (2) ರ ಪತ್ರಗಳಲ್ಲಿ ಸಂಘದಲ್ಲಿ ನಡೆದಿದೆಯನ್ನಲಾದ ಗುರುತರ ಆರೋಪಗಳ ಕುರಿತು ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ ಇವರು ಪ್ರಕರಣ 64ರ ವಿಚಾರಣೆಗೆ ಆದೇಶಿಸಿರುತ್ತಾರೆ. ವಿಚಾರಣೆಯು ಪ್ರಗತಿಯಲ್ಲಿದ್ದು, ವರದಿ ಸ್ವೀಕೃತವಾದ ನಂತರ ವರದಿಯಲ್ಲಿನ ಅಂಶಗಳ ಬಗ್ಗೆ ಪರಿಶೀಲಿಸಿ, ಸಂಘದ ನ್ಯೂನತೆಗಳ ಸ್ವರೂಪದ ಆಧಾರದ ಮೇಲೆ ನಿಯಮಾನುಸಾರ ಕ್ರಮ ವಹಿಸುವ ಷರತ್ತಿಗೊಳಪಟ್ಟು 2009-10 ಮತ್ತು 2010-11ನೇ ಸಾಲುಗಳ ವಾರ್ಷಿಕ ಮಹಾಸಭೆಯನ್ನು ದಿನಾಂಕ : 30-09-2012 ರೊಳಗೆ ನಡೆಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಓ 62 ಸಿಎಲ್ ಎಮ್ 2012, ಬೆಂಗಳೂರು, ದಿನಾಂಕ: 26ನೇ ಮೇ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ದಿ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮಲ್ಲೇಶ್ವರಂ, ಬೆಂಗಳೂರು ಇದರ 2009-10 ಮತ್ತು 2010-11ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ನಡೆಸಲು ದಿನಾಂಕ : 30-09-2012 ರವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ :

27ರ ಪ್ರಕರಣದಲ್ಲಿ :

27ನೇ ಪ್ರಕರಣ ಉಪಪ್ರಕರಣ(1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಇಪ್ಪತ್ತನಾಲ್ಕು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ :**

ಪ್ರಕರಣ 27 (1) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 30-09-2012 ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

**ಷರತ್ತು :**

ಸಂಘದ ವಿರುದ್ಧ ಈಗಾಗಲೇ ಆದೇಶಿಸಿರುವ ಕರ್ನಾಟಕ ಸಹಕಾರ ಸಂಘಗಳ ಅದಿನಿಯಮ 1959 ರ ಪ್ರಕರಣ 64 ರ ವಿಚಾರಣಾ ವರದಿ ಸ್ವೀಕೃತವಾದ ನಂತರ ವರದಿಯಲ್ಲಿನ ಅಂಶಗಳ ಬಗ್ಗೆ ಪರಿಶೀಲಿಸಿ, ಸಂಘದಲ್ಲಿನ ನ್ಯೂನತೆಗಳ ಸ್ವರೂಪದ ಆಧಾರದ ಮೇಲೆ ನಿಯಮಾನುಸಾರ ಕ್ರಮ ವಹಿಸುವ ಷರತ್ತನ್ನು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1630

**ಬಿ.ಸಿ. ಸತೀಶ್**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

## COMMERCE & INDUSTRIES SECRETARIAT

**Sub :** Amendment to the project proposal of M/s patel Engineering Ltd to establish an integrated township including Residential, Commercial, IT Park and SEZs approved earlier at Hulimangala, Gollahalli, Thirupalya and Maragondanahalli Villages of Anekal Taluk Bangalore Urban District- extension of time; Reg.

**Read :**1. Government Order No. ITD/32/MDA/2007 dated 17-03-2008.

2. Addendum No. ITD 02 MDA 2009, dated 16-01-2009.
3. 27th SHLCC meeting held on 13-04-2012.
4. Government Order No. CI 137 SPI 2012 dated : 21-04-2012.
5. 28th SHLCC meeting held on 23-05-2012.
6. Government Order No. CI 137 SPI 2012 dated : 28-05-2012.

**Preamble:**

The Proposal of M/s Patel Engineering Ltd., to establish two separate Sector Specific SEZs in Electronic Hardware/Software/IT & ITES area through two SPVs created by the subsidiaries of M/s Patel Engineering Ltd. Namely, M/s Hera Realcon Pvt. Ltd. And M/s Hebe Infracon Pvt. Ltd. In 25.375 and 25.81 acres of land respectively and remaining land for Non-SEZ area in 103 acres, 17 guntas of land at Hulimangala, Gollahalli, Thirupalya and Maragondanahalli villages of Anekal Taluk Bangalore Urban District with an investment of Rs. 490 Cr. Was approved vide GO referred above at (1) & (2).

The Company subsequently has submitted another proposal on 27-11-2011 to establish an integrated township with Residential mixed use including Residential, Commercial and IT Park project in 147 Acres 10.4 guntas of land at different sy. No's detailed in Annexure B at Hulimangala, Gollahalli, Thirupalya and Maragondanahalli villages of Anekal Taluk Bangalore urban district adjacent to their earlier approved project (vide Govt. Order dated : 17-03-2008) with an investment of Rs. 2025 crores and to provide employment to 51452 persons was approved in 27th SHLCC meeting held on 13-04-2012 and GO has been issued accordingly vide No. CI 137 SPI 2012 Bangalore dated : 21-04-2012 read at (4) above.

As the location of the present proposal is adjacent and contiguous land to their earlier approved project and the activity is same, the company vide its letter dated : 05-05-2012 requested;

- To consider the present proposal as expansion and integral to the earlier project approved in 10th SHLCC meeting.
- To recommend to KIADB to approve the building plan and validity for 5 years to implement the project.

The project, integrated township with Residential mixed use including Residential, Commercial and IT Park in 147 acre and 10.4 guntas of land at different Sy. No. which was approved in 27th SHLCC meeting may be considered as additional activity and integral to the earlier approved two SEZ projects of electronic Hardware/Software/IT and ITES in 51.185 acres of land and 52.2 acres of Non SEZ Area vide G.O. No. ITD/32/MDA/2007Dated 17-03-2008.

The subject was discussed in detail in the SHLCC meeting held on 23-05-2012 and the request was considered favourably. Government has examined the recommendations made by the State High Level Clearance Committee meeting and further directions of the Hon'ble Minister for Large & Medium Industries, in all aspects.

Hence the following order.

**Government Order No. CI 137 SPI 2012, Bangalore, Dated: 6th June 2012.**

Government is pleased to approve :

(1) Extension of time by 3 years from the date of issue of this Order for implementation of the project,

(2) To consider the two projects approved earlier vide G.Os referred at (1), (2) & (4) above as single entity or as single project with following details :

a) To establish two separate Sector Specific SEZs in electronic Hardware/Software/IT & ITES area through two SPVs created by the subsidiaries of M/s Patel Engineering Ltd. Namely, M/s Hera Realcon Pvt. Ltd. And M/s; Hebe Infracon Pvt. Ltd. In 25.375 and 25.81 acres of land respectively and remaining land for Non-SEZ area in 103 acres, 17 guntas of land at Hulimangala, Gollahalli, Thirupalya and Maragondanahalli villages of Anekal Taluk Bangalore Urban District with an investment of Rs. 490 Cr. as approved vide GO No. ITD/32/MDA/2007 dated : 17-03-2008 and Addendum vide No. ITD 02 MDA 2009 dated : 16-01-2009.

b) Integrated township with Residential mixed use including Residential, commercial and IT Park project in 147 Acres 10.4 guntas of land at different Sy. No's in Hulimangala, Gollahalli, Thirupalya and Maragondanahalli villages of Anekal Taluk Bangalore urban district (approved in 27th SHLCC).

The Government Order No. CI 137 SPI 2012 dated : 28-05-2012 read at (6) above stands withdrawn and other terms and conditions remain the same as in the Government Order read at (1), (2) and (4) above.

PR.1631

By Order and in the name of the Governor of Karnataka,

**Jyothi R.J**

Desk Officer (Technical Cell)

Commerce & Industries

## ವಸತಿ ಸಚಿವಾಲಯ

**ವಿಷಯ :** "ನನ್ನ ಮನೆ–ಧಾರಣೀಯ ಗೃಹ ನಿರ್ಮಾಣ ಯೋಜನೆ" (Affordable Housing Scheme) ಯೋಜನೆಯಡಿ ಸಿಂಗನಾಯ್ಕನಹಳ್ಳಿ, ಹುಣಸೆಮಾರನಹಳ್ಳಿ, ಕೊಡತಿ ಮತ್ತು ತಾಳಗುಪ್ಪೆ ಗ್ರಾಮದಲ್ಲಿ ವಸತಿ ಗೃಹಗಳಿಗೆ ಮೂಲಭೂತ ಸೌಲಭ್ಯವನ್ನು ಒದಗಿಸುವ ಕಾಮಗಾರಿ ಮಂಜೂರಾತಿ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ವಇ 40 ಹೆಚ್ಎಹೆಚ್ 2010, ದಿನಾಂಕ : 26–08–2011.
2. ಸರ್ಕಾರದ ಆದೇಶ ಸಂಖ್ಯೆ : ವಇ 40 ಹೆಚ್ಎಹೆಚ್ 2010, ದಿನಾಂಕ : 17–09–2011.
3. ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಪ್ರಸ್ತಾವನೆ ಪತ್ರ ಸಂಖ್ಯೆ : ಜಿಎಂಟಿ ಆರ್ ಜಿಆರ್ಹೆಚ್ ಸಿಎಲ್ 01 ಟಿಇಸಿ 21 2010 ದಿನಾಂಕ : 28–02–2012.
4. ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಪ್ರಸ್ತಾವನೆ ಪತ್ರ ಸಂಖ್ಯೆ : ಎಂಡಿಆರ್ಜಿಆರ್ಹೆಚ್ಸಿಎಲ್ 01 ಟಿಇಸಿ 28 2010, ದಿನಾಂಕ : 09–04–2012.

**ಪ್ರಸ್ತಾವನೆ:**

ಓದಲಾಗಿರುವ ಸರ್ಕಾರದ ಆದೇಶ (1)ರಲ್ಲಿ ಸರ್ಕಾರವು "ನನ್ನ ಮನೆ–ಧಾರಣೀಯ ಗೃಹ ನಿರ್ಮಾಣ ಯೋಜನೆ" (Affordable Housing Scheme) ಯೋಜನೆಯಡಿ ಬೆಂಗಳೂರು ಮತ್ತು ರಾಮನಗರ ಜಿಲ್ಲೆಗಳಲ್ಲಿ 1668 (ನೆಲ+ಎರಡು ಮಹಡಿ) ಮನೆಗಳ ನಿರ್ಮಾಣ ಕಾಮಗಾರಿಗೆ ರೂ. 6032.00 ಲಕ್ಷಗಳ ಅಂದಾಜು ವೆಚ್ಚಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿತ್ತು.

ಓದಲಾಗಿರುವ (2)ರ ಸರ್ಕಾರದ ಆದೇಶದಲ್ಲಿ "ನನ್ನ ಮನೆ–ಧಾರಣೀಯ ಗೃಹ ನಿರ್ಮಾಣ ಯೋಜನೆ" (Affordable Housing Scheme) ಯೋಜನೆಯಡಿ ನಿರ್ಮಾಣ ಮಾಡುವ ಕಾಮಗಾರಿಗೆ ಹೊಸ ತಾಂತ್ರಿಕತೆಯನ್ನು ಬಳಸಿ ನಿರ್ಮಾಣ ಮಾಡಲು ತಜ್ಞರ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಿದೆ.

ಓದಲಾಗಿರುವ (3) ಮತ್ತು (4)ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ. "ನನ್ನ ಮನೆ–ಧಾರಣೀಯ ಗೃಹ ನಿರ್ಮಾಣ ಯೋಜನೆ" (Affordable Housing Scheme) ಯೋಜನೆಯಡಿ ಸಿಂಗನಾಯ್ಕನಹಳ್ಳಿ, ಹುಣಸೆಮಾರನಹಳ್ಳಿ, ಕೊಡತಿ ಮತ್ತು ತಾಳಗುಪ್ಪೆ ಪ್ರದೇಶಗಳಲ್ಲಿ ನಿರ್ಮಾಣಗೊಳ್ಳುತ್ತಿರುವ ಬಡಾವಣೆಗಳಿಗೆ ಮೂಲಭೂತ ಸೌಕರ್ಯ ಒದಗಿಸುವ ಕಾಮಗಾರಿಯನ್ನು 12 ಕೋಟಿ 40 ಲಕ್ಷ ರೂ. ವೆಚ್ಚದಲ್ಲಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮವು ನಿರ್ಮಿತಿ ಕೇಂದ್ರಗಳ ಮೂಲಕ ಕೈಗೆತ್ತಿಕೊಳ್ಳಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಈ ಕಾಮಗಾರಿಗೆ ತಗಲುವ ವೆಚ್ಚ ರೂ. 12 ಕೋಟಿ 40 ಲಕ್ಷಗಳು ಪ್ರತಿ ಮನೆಯ ಘಟಕ ವೆಚ್ಚದಲ್ಲಿಯೇ ಒಳಗೊಂಡಿದ್ದು ಈ ಎಲ್ಲಾ ವೆಚ್ಚವನ್ನು ಹಂಚಿಕೆದಾರ ಫಲಾನುಭವಿಗಳಿಂದ ಭರಿಸಲಾಗುತ್ತದೆ. ಇದರಿಂದ ಸರ್ಕಾರಕ್ಕಾಗಲಿ ಅಥವಾ ನಿಗಮಕ್ಕಾಗಲಿ ಯಾವುದೇ ಆರ್ಥಿಕ ಹೊರೆಯಾಗುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 26 ಹೆಚ್ಎಹೆಚ್ 2012, ಬೆಂಗಳೂರು, ದಿನಾಂಕ: 15–05–2012**

ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ಇವರು, ನಿರ್ಮಿತಿ ಕೇಂದ್ರಗಳ ಮುಖಾಂತರ "ನನ್ನ ಮನೆ–ಧಾರಣೀಯ ಗೃಹ ನಿರ್ಮಾಣ ಯೋಜನೆ" (Affordable Housing Scheme) ಯೋಜನೆಯಡಿ ಸಿಂಗನಾಯ್ಕನಹಳ್ಳಿ, ಹುಣಸೆಮಾರನಹಳ್ಳಿ, ಕೊಡತಿ ಮತ್ತು ತಾಳಗುಪ್ಪೆ ಗ್ರಾಮದಲ್ಲಿ ವಸತಿ ಗೃಹಗಳಿಗೆ ಮೂಲಭೂತ ಸೌಲಭ್ಯವನ್ನು ಒದಗಿಸುವ ಕಾಮಗಾರಿಯನ್ನು ರೂ. 12 ಕೋಟಿ 40 ಲಕ್ಷ (ರೂ. ಹನ್ನೆರಡು ಕೋಟಿ ನಲವತ್ತು ಲಕ್ಷಗಳು) ವೆಚ್ಚದಲ್ಲಿ ಕೈಗೊಳ್ಳಲು ಈ ಕೆಳಕಂಡ ಷರತ್ತಿನೊಂದಿಗೆ ಸರ್ಕಾರದ ಮಂಜೂರಾತಿಯನ್ನು ನೀಡಿದೆ.

1. ಈ ಕಾಮಗಾರಿಗೆ ತಗಲುವ ವೆಚ್ಚ ರೂ. 12 ಕೋಟಿ 40 ಲಕ್ಷ ಲಕ್ಷಗಳು ಪ್ರತಿ ಮನೆಯ ಘಟಕ ವೆಚ್ಚದಲ್ಲಿಯೇ ಒಳಗೊಂಡಿದ್ದು, ಈ ಎಲ್ಲಾ ವೆಚ್ಚವನ್ನು ಹಂಚಿಕೆದಾರ ಫಲಾನುಭವಿಗಳಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್ ಡಿ 178 ವೆಚ್ಚ–9/2012, ದಿನಾಂಕ : 29–03–2012 ಮತ್ತು ಎಫ್‌ಡಿ 178 ವೆಚ್ಚ–9/2012, ದಿನಾಂಕ : 25–04–2012ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಶಂಕರಪ್ಪ,**
ಪೀಠಾಧಿಕಾರಿ–2,
ವಸತಿ ಇಲಾಖೆ.

**ಪಿ.ಆರ್. 1405**

## WATER RESOURCES SECRETARIAT

**Sub**: Issue of Government Guarantee for the borrowing programme of KBJNL to the extent of Rs. 250.00 crores

**Read**: 1. Letter No. KBJNL/FD/RES/334/2011-12/307, Dated : 16/02/2012.

**Preamble:**

Managing Director, Krishna Bhagya Jala Nigam Limited vide their letter above had requested the Government for according approval for borrowing Rs. 250.00 crores by issue of bonds and/or through raising term loans from Banks, Financial Institutions.

The request of Krishna Bhagya Jala Nigam Limited has been carefully examined by the Government and has decided to agree to the request of the Managing Director, KBJNL and hence the following Orders :

**GOVERNMENT ORDER NO. WRD 60 KBN 2012, BANGALORE, DATED: 28.03.2012.**

In principal approval of Government is accorded to Krishna Bhagya Jala Nigam Limited to mobilize Rs. 250.00 crores (Rupees Two hundred fifty crores only) and to initiate action for the same during 2011-12, subject to the following :

1. Funds may be raised by issue of bonds at competitive coupon rate to be fixed based on the market condition at the time of borrowing.
2. Unconditional, irrevocable, irreversible Government Guarantee for the repayment of principal and payment of interest till the redemption of bonds.
3. Approval has been accorded for making budgetary provision for payment of interest and repayment of principal on due dates.
4. Approval has been accorded to offer the assets of the Nigam as collateral security by way of pari-passu charge on the assets to be hypothecated to the Trustees of the bondholders.
5. The Board of KBJNL has been authorized to finalize the structures of the bonds, interest rates, tenure of the bonds and other terms and conditions as per the recommendations of the Finance Sub-Committee of the Board of Directors of Krishna Bhagya Jala Nigam Limited under the Chairmanship of the Principal Secretary, Finance Department.

By Order and in the name of Governor of Karnataka,

**I. D. DHAMAN,**

Officer on Special Duputy,

Water Resources Department (KBJNL)

**P.R. 1411**

## ಶಿಕ್ಷಣ ಸಚಿವಾಲಯ

**ವಿಷಯ :** 2012–13ನೇ ಸಾಲಿನ ಆರ್ಥಿಕ ವರ್ಷಕ್ಕೆ ಕರ್ನಾಟಕ ಪಠ್ಯ ಪುಸ್ತಕ ಸಂಘದ ಸಿಬ್ಬಂದಿ ವೇತನ ಭತ್ಯೆ, ಇತರೇ ವೆಚ್ಚ ಹಾಗೂ ಪಠ್ಯ ಪುಸ್ತಕಗಳ ಮುದ್ರಣಾ ವೆಚ್ಚಗಳನ್ನು ಭರಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರುರವರ ಪತ್ರ ಸಂಖ್ಯೆ : ಕಪಪುಸಂ / ಲೆಶಾ / ಕಪಪುಸಂ / ಆಯವ್ಯಯ / ಅನುದಾನ ಬೇಡಿಕೆ–05/2011–12, ದಿನಾಂಕ: 06–03–2012.

**ಪ್ರಸ್ತಾವನೆ:**

1. ಮೇಲೆ ಓದಲಾದ ತಮ್ಮ ದಿನಾಂಕ : 06–03–2012ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಪಠ್ಯಪುಸ್ತಕ ಸಂಘರವರು 2012–13ನೇ ಸಾಲಿನ ಪಠ್ಯಪುಸ್ತಕ ಮುದ್ರಣಕ್ಕೆ ಸಂಬಂಧಿಸಿದಂತೆ ಮುದ್ರಕರುಗಳಿಂದ ಪಠ್ಯಪುಸ್ತಕಗಳ ಮುದ್ರಣ ಬಾಬ್ತು ಬಿಲ್ಲುಗಳು ಬರಲಾರಂಭಿಸಿದ್ದು ಅವುಗಳನ್ನು ತ್ವರಿತವಾಗಿ ಪಾವತಿಸಬೇಕಾಗಿರುವುದರಿಂದ 2012–13ನೇ ಸಾಲಿಗೆ ಯೋಜನೇತರದಡಿ ನಿಗದಿಯಾಗಿರುವ 6500.00 ಲಕ್ಷರೂಗಳ

ಮೊತ್ತವನ್ನು ಒಂದೇ ಕಂತಿನಲ್ಲಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ವ್ಯವಸ್ಥಾಪಕ ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 71 ಯೋಯೋಕ 2012, ಬೆಂಗಳೂರು, ದಿನಾಂಕ: 10–05–2012**

**[ಇಡಿ 13 ಸ್ವೀಮರ (ಯುನಿಕ್) 2012, ದಿನಾಂಕ : 10–05–2012]**

2. 2012–13ನೇ ಸಾಲಿನಲ್ಲಿ ಕರ್ನಾಟಕ ಪಠ್ಯ ಪುಸ್ತಕ ಸಂಘ, ಬೆಂಗಳೂರು ಇದರ ಸಿಬ್ಬಂದಿ ವೇತನ ಇತರೇ ಭತ್ಯೆ ಹಾಗೂ ಪಾಠ್ಯ ಪುಸ್ತಕಗಳ ಮುದ್ರಣ ವೆಚ್ಚವಾಗಿ ಮೊದಲನೇ ಕಂತಾಗಿ ಆಯವ್ಯಯ ಲೆಕ್ಕಶೀರ್ಷಿಕೆ 2058–00–103-0–09–101–[ಯೋಜನೇತರ] ಅಡಿ ಮೊದಲೇ ಕಂತಾಗಿ 1625.00 ಲಕ್ಷರೂಗಳನ್ನು [ಸಾವಿರದ ಆರೂನೂರ ಇಪ್ಪತ್ತೈದು ಲಕ್ಷರೂಪಾಯಿಗಳುಮಾತ್ರ] ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯ ಪುಸ್ತಕ ಸಂಘ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಿದೆ.

3. ಸದರಿ ಮೊತ್ತವನ್ನು ಪಾವತಿಸುವ ಸಲುವಾಗಿ ಖಜಾನೆಯಲ್ಲಿ ಅಪ್ ಲೋಡ್ ಮಾಡಲು ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ ಮತ್ತು ಸದರಿ ಮೊತ್ತವನ್ನು ರಾಜ್ಯ ಹುಜೂರ್ ಖಜಾನೆಯಿಂದ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಪಠ್ಯ ಪುಸ್ತಕ ಸಂಘ, ಬೆಂಗಳೂರು ಇವರು ಸೆಳೆಯಲು ಅನುಕೂಲವಾಗುವಂತೆ ಅವರು ಸಲ್ಲಿಸುವ ಬಿಲ್ಲುಗಳಿಗೆ ಮೇಲುಸಹಿ ಮಾಡುವ ಅಧಿಕಾರವನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ. ಇವರ ಮೇಲು ಸಹಿಯಾದ ನಂತರ ಈ ಮೊತ್ತವನ್ನು ರಾಜ್ಯ ಹುಜೂರು ಖಜಾನೆಯಿಂದ ಸೆಳೆಯಬಹುದು. ಸರ್ಕಾರದಿಂದ ಬಿಡುಗಡೆಯಾದ ಅನುದಾನಕ್ಕೆ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಪಠ್ಯ ಪುಸ್ತಕ ಸಂಘ [ರಿ] ಬೆಂಗಳೂರು, ಇವರು ಸೂಕ್ತ ಲೆಕ್ಕಪತ್ರಗಳನ್ನು ಇಡತಕ್ಕದ್ದು.

4. ಪ್ರಾಥಮಿಕ ಮತ್ತು ಪ್ರೌಢಶಿಕ್ಷಣಕ್ಕೆ 2012–13ನೇ ಸಾಲಿಗೆ ನಿಗದಿಪಡಿಸಿರುವ ಒಟ್ಟಾರೆ ಆಯವ್ಯಯದಲ್ಲಿ ಲೇಖಾನುದಾನವಾಗಿ ಬಿಡುಗಡೆಯಾಗಿರುವ ಮೊತ್ತದ ಮಿತಿಯನ್ನು ಕಾಯ್ದುಕೊಳ್ಳತಕ್ಕದ್ದು.

5. ಸದರಿ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ; ಶಿಇ 225 ಐಎಫ್ (ಎ & ಬಿ) 2012, ದಿನಾಂಕ: 28–04–2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಎಫ್. ಮಾಗಿ,**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ).

**ಪಿ.ಆರ್. 1412**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆ : ಸಿಆಸುಇ 107 ಆಸೇವ 2011, ಬೆಂಗಳೂರು, ದಿನಾಂಕ : 16ನೇ ಮೇ 2012**

ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 107 ಆಸೇವ 2011, ದಿನಾಂಕ : 07–03–2012ರಲ್ಲಿ ಶ್ರೀ ಮಂಡೋನ್ಸಾ ಆಂಟನಿ, ನಿವೃತ್ತ ಕೆ.ಎ.ಎಸ್. (ಸೂ.ಟೈಂ.ಸ್ಕೇ.) ಅಧಿಕಾರಿ, ಇವರನ್ನು ಮಾನ್ಯ ಕರ್ನಾಟಕ ರಾಜ್ಯದ ವಿಶೇಷ ಪ್ರತಿನಿಧಿ, ನವದೆಹಲಿ, ಇವರ ಆಪ್ತ ಕಾರ್ಯದರ್ಶಿಯಾಗಿ ಗುತ್ತಿಗೆ ಆಧಾರದ ನೇಮಕಾತಿಗೆ ಸಂಬಂಧಿಸಿದಂತೆ ಷರತ್ತು ಮತ್ತು ನಿಬಂಧನೆಗಳ ಆದೇಶವನ್ನು ಹೊರಡಿಸಲಾಗಿದ್ದು, ಸದರಿ ಆದೇಶದ ಎರಡನೇ ಷರತ್ತಿನಲ್ಲಿ ನಮೂದಿಸಿರುವ "ಶ್ರೀ ಮಂಡೋನ್ಸಾ ಆಂಟನಿ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 15564–00 ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಅವರು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲ ವೇತನದ ಮೇಲೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ ನಗರಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಸೇರಿದಂತೆ ಯಾವುದೇ ಇತರೆ ಭತ್ಯೆಗಳು ಲಭ್ಯವಿರುವುದಿಲ್ಲ". ಎಂಬುದರ ಬದಲಾಗಿ "ಶ್ರೀ ಮಂಡೋನ್ಸಾ ಆಂಟನಿ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 15564–00 ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಅವರು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲ ವೇತನ ರೂ. 34,050–00ಗಳಿಗೆ (ಮೂವತ್ತಾನಾಲ್ಕು ಸಾವಿರದ ಐವತ್ತು ರೂಪಾಯಿಗಳು ಮಾತ್ರ) ಲಭ್ಯವಾಗುವ ತುಟ್ಟಿಭತ್ಯೆ, ಹೆಚ್.ಆರ್.ಎ., ನಗರಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಸೇರಿದಂತೆ ಯಾವುದೇ ಇತರೆ ಭತ್ಯೆಗಳು ಲಭ್ಯವಿರುವುದಿಲ್ಲ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಡಗಾವೆ ಬಸವರಾಜ,**

ಸರ್ಕಾರದ ಅಧೀನ ಕಾರ್ಯದರ್ಶಿ

**ಪಿ.ಆರ್. 1414**

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿರ್ದೇಶಕರು (ಸ್ವ-ಉದ್ಯೋಗ ಕಾರ್ಯಕ್ರಮ ಶಾಖೆ) ಹಾಗೂ ಪದನಿಮಿತ್ತ ಉಪ/ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 46 ಸಸಿವಿ 2006, ದಿನಾಂಕ : 15-06-2006.
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 302 ಸಅಸೇ 2009, ದಿನಾಂಕ : 09-06-2009.
3. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 225 ಸಅಸೇ 2010, ದಿನಾಂಕ : 15-05-2010.
4. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 222 ಸಅಸೇ 2011, ದಿನಾಂಕ : 07-05-2011
5. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ : ಗ್ರಾಅಪ : 2 ಸೃಜೆಸಿ 2011, ದಿನಾಂಕ 05-4-2012.

**ಪ್ರಸ್ತಾವನೆ:-**

ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿರ್ದೇಶಕರು (ಸ್ವ-ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ : 2 ರಿಂದ 4 ರವರೆಗಿನ ಆದೇಶಗಳಲ್ಲಿ ಸದರಿ ಹುದ್ದೆಯನ್ನು ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

ಮೇಲೆ ಕ್ರಮಸಂಖ್ಯೆ (5)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಗ್ರಾಮೀಣಾಭಿವೃದ್ಧ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿರ್ದೇಶಕರು (ಸ್ವ-ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಉಪ/ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 222 ಸಅಸೇ 2011 ದಿನಾಂಕ : 07-05-2011ರಲ್ಲಿ ದಿನಾಂಕ : 24-06-2012ರ ವರೆಗೆ ಮುಂದುವರಿಸಿದ್ದು, ಸದರಿ ಹುದ್ದೆಯನ್ನು ದಿನಾಂಕ : 25-06-2012 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 225 ಸಅಸೇ 2012, ಬೆಂಗಳೂರು, ದಿನಾಂಕ : 07ನೇ ಮೇ 2012**

ಕರ್ನಾಟಕ ಸರ್ಕಾರದ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿರ್ದೇಶಕರು (ಸ್ವ-ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಉಪ/ಜಂಟಿ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ : 25-06-2012 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್ ಡಿ 1 ಟಿಎಫ್ ಪಿ 1996, ದಿನಾಂಕ : 10-07-1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಕೆ. ಲಕ್ಷ್ಮೀನಾರಾಯಣರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3)

**ಪಿ.ಆರ್. 1415**

## ಕಾರ್ಮಿಕ ಸಚಿವಾಲಯ

**ವಿಷಯ :** ಜರ್ಮನ್ ಇಂಟರ್ ನ್ಯಾಷನಲ್ ಸರ್ವೀಸಸ್ (ಜಿಐಜೆಡ್-ಐಎಸ್)ರವರು ಸಾರ್ವಜನಿಕ ಖಾಸಗಿ ಸಹಭಾಗಿತ್ವದ ಯೋಜನೆಯಡಿಯಲ್ಲಿನ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿರುವ ಕಿರಿಯ ತರಬೇತಿ ಅಧಿಕಾರಿಗಳಿಗೆ ಜರ್ಮನಿಯಲ್ಲಿ ತರಬೇತಿ ನೀಡಲು ಹೊರಡಿಸಿರುವ ಆದೇಶವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಕಾಇ 89 ಇಟಿಐ 2011, ದಿನಾಂಕ : 20-04-2012.
2. ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ನಂ. ಉತಇ/ತ/ಪಿಪಿಪಿ-ಜಿಐಜೆಡ್-ಐಎಸ್/ಟಿಆರ್‌ಜಿ/ವಿವ-09/2011-12, ದಿನಾಂಕ : 30-04-2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಒಟ್ಟು 7 ಮಂದಿ ಕಿರಿಯ ತರಬೇತಿ ಅಧಿಕಾರಿಗಳನ್ನು ದಿನಾಂಕ : 23/04/2012ರಿಂದ ದಿನಾಂಕ : 04-05-2012ರವರೆಗೆ SLV, Mannhein Germany ಇಲ್ಲಿ ಜಿಐಜೆಡ್-ಐಎಸ್ ಸಂಸ್ಥೆಯು ನಡೆಸಲಿರುವ ತರಬೇತಿಗೆ ನಿಯೋಜಿಸಲು

ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ಅಲ್ಲದೇ, ಈ 7 ಮಂದಿ ತರಬೇತಿಯನ್ನು ಪೂರೈಸಿದ ನಂತರ ಕನಿಷ್ಠ 3 ವರ್ಷಗಳವರೆಗೆ ಪಿ.ಪಿ.ಪಿ. ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸತಕ್ಕದ್ದು ಎನ್ನುವ ಷರತ್ತನ್ನು ವಿಧಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ಮೇಲೆ ನಿಯೋಜಿಸಿರುವ 7 ಕಿರಿಯ ತರಬೇತಿ ಅಧಿಕಾರಿಗಳ ಪಾಸ್ ಪೋರ್ಟ್ ಮತ್ತು ವೀಸಾ ಪಡೆಯಲು ವಿಳಂಬವಾಗುತ್ತಿರುವ ಹಿನ್ನೆಲೆಯಲ್ಲಿ ಜರ್ಮನಿಯಲ್ಲಿ ನಡೆಯಲಿರುವ ತರಬೇತಿಯನ್ನು ದಿನಾಂಕ : 28/05/2012ರಿಂದ 08/06/2012ರವರೆಗೆ ನಡೆಸಲಾಗುವುದೆಂದು ಜಿಐಜೆಡ್–ಐಎಸ್ ನವರು ತಿಳಿಸಿರುತ್ತಾರೆಂದೂ, ಆದುದರಿಂದ ಈ ಅವಧಿಯಲ್ಲಿ ತರಬೇತಿಯಲ್ಲಿ ಭಾಗವಹಿಸಲು ಪರಿಷ್ಕೃತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಾಇ 89 ಇಟಿಐ 2011, ಬೆಂಗಳೂರು, ದಿನಾಂಕ : 17ನೇ ಮೇ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಕಾಇ 89 ಇಟಿಐ 2011 ದಿನಾಂಕ : 20–04–2012ನ್ನು ಪರಿಷ್ಕರಿಸಿ ಇದರೊಂದಿಗೆ ಲಗತ್ತಿಸಿರುವ ಅನುಬಂಧ–Iರಲ್ಲಿನ 7 ಮಂದಿ ಕಿರಿಯ ತರಬೇತಿ ಅಧಿಕಾರಿಗಳನ್ನು ದಿನಾಂಕ : 28/05/2012 ರಿಂದ ದಿನಾಂಕ : 08/06/2012ರವರೆಗೆ SLV, Mannhein Germany ಇಲ್ಲಿ ಜಿಐಜೆಡ್–ಐಎಸ್ ಸಂಸ್ಥೆಯು ನಡೆಸಲಿರುವ ತರಬೇತಿಗೆ ನಿಯೋಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ಈ 7 ಮಂದಿ ತರಬೇತಿಯನ್ನು ಪೂರೈಸಿದ ನಂತರ ಕನಿಷ್ಠ 3 ವರ್ಷಗಳವರೆಗೆ ಪಿ.ಪಿ.ಪಿ. ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸತಕ್ಕದ್ದು ಎನ್ನುವ ಷರತ್ತನ್ನು ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ. ಎಸ್. ವಿಶ್ವನಾಥಪ್ಪ,**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

**ಪಿ.ಆರ್. 1416**

## ಕಂದಾಯ ಸಚಿವಾಲಯ

**ವಿಷಯ :** ಕಾರವಾರ ತಾಲ್ಲೂಕು ಕೇಂದ್ರದಲ್ಲಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣ–ಮಂಜೂರಾತಿ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ : ಕಂಶಾ/ಭೂಮಿ–1/ವಿವ–121/11–12, ದಿನಾಂಕ : 20–03–2012.

**ಪ್ರಸ್ತಾವನೆ :**

ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ ಕಾರವಾರರವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲೆಯ ಕೇಂದ್ರ ಸ್ಥಾನವಾದ ಕಾರವಾರದಲ್ಲಿ ತಾಲ್ಲೂಕು ಕಛೇರಿಗಾಗಿ ಮಿನಿ ವಿಧಾನಸೌಧ ಕಟ್ಟಡವನ್ನು ಬಾಡ ಗ್ರಾಮದ ಸರ್ವೆ ನಂ. 1408/ಬ ರ 24 ಗುಂಟೆ ವಿಸ್ತೀರ್ಣದ ಜಮೀನಿನಲ್ಲಿ ರೂ. 925.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ನಿರ್ಮಾಣ ಮಾಡಲು ಮಂಜೂರಾತಿ ನೀಡುವಂತೆ ಕೋರುತ್ತಾ ರೇಖಾ ಅಂದಾಜುಪಟ್ಟಿ ಮತ್ತು ನಕ್ಷೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಕಾರವಾರ ಪಟ್ಟಣದಲ್ಲಿ ಕಾರ್ಯನಿರ್ವಹಿಸುತ್ತಿರುವ ತಾಲ್ಲೂಕು ಕಛೇರಿ ಮತ್ತು ತಾಲ್ಲೂಕು ಮಟ್ಟದ ಎಲ್ಲಾ ಕಛೇರಿಗಳನ್ನು ಒಂದೇ ಸೂರಿನಡಿ ತರಲು ಮಿನಿ ವಿಧಾನಸೌಧ ಕಟ್ಟಡವನ್ನು ನಿರ್ಮಾಣ ಮಾಡಲು ಮಂಜೂರಾತಿ ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 19 ಡಬ್ಲ್ಯೂಬಿಆರ್ 2012, ಬೆಂಗಳೂರು, ದಿನಾಂಕ: 17–04–2012**

ಉತ್ತರ ಕನ್ನಡ ಜಿಲ್ಲಾ ಕೇಂದ್ರವಾದ ಕಾರವಾರ ಪಟ್ಟಣದಲ್ಲಿ ತಾಲ್ಲೂಕು ಕಛೇರಿ ಮತ್ತು ಇತರೇ ತಾಲ್ಲೂಕು ಮಟ್ಟದ ಎಲ್ಲಾ ಕಛೇರಿಗಳಿಗಾಗಿ ಬಾಡ ಗ್ರಾಮದ ಸರ್ವೆ ನಂ. 1408/ಬ ರ 24 ಗುಂಟೆ ವಿಸ್ತೀರ್ಣದ ಜಮೀನಿನಲ್ಲಿ ಮಿನಿ ವಿಧಾನಸೌಧ ಕಟ್ಟಡವನ್ನು ರೂ. 925.00 ಲಕ್ಷ (ರೂಪಾಯಿ ಒಂಬೈನೂರ ಇಪ್ಪತ್ತೈದು ಲಕ್ಷಗಳು ಮಾತ್ರ)ಗಳ ಅಂದಾಜು ವೆಚ್ಚದಲ್ಲಿ ನಿರ್ಮಾಣ ಮಾಡಲು ಮಂಜೂರಾತಿಯನ್ನು ನೀಡಲಾಗಿದೆ.

ಮಿನಿ ವಿಧಾನಸೌಧ ಕಟ್ಟಡದ ಕಾಮಗಾರಿಯ ಸವಿವರ ಅಂದಾಜುಪಟ್ಟಿ ಮತ್ತು ನಕ್ಷೆಯನ್ನು ಸರ್ಕಾರಕ್ಕೆ ಸಲ್ಲಿಸಿ ಆಡಳಿತಾತ್ಮಕ ಅನುಮೋದನೆಯನ್ನು ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿ. ಶ್ರೀರಾಮರೆಡ್ಡಿ,**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಸುಧಾರಣಾ ಕೋಶ)

**ಪಿ.ಆರ್. 1417**

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005(ಭಾ), ಬೆಂಗಳೂರು, ದಿನಾಂಕ: 08-05-2012**

ಸರ್ಕಾದ ಆದೇಶ ಸಂಖ್ಯೆ : ಕಂಇ 77 ಡಬ್ಲ್ಯೂಬಿಆರ್ 2011, ದಿನಾಂಕ : 17/02/2012ನ್ನು ಸರ್ಕಾರದ ಆದೇಶ ಸಂಖ್ಯೆ : ಕಂಇ 72 ಡಬ್ಲ್ಯೂಬಿಆರ್ 2005 (ಭಾ), ದಿನಾಂಕ : 17/02/2012 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಶ್ರೀರಾಮರೆಡ್ಡಿ,**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಸುಧಾರಣಾ ಕೋಶ)

**ಪಿ.ಆರ್. 1419**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಾವೇರಿ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಯೋಇ : 309 : ಪಿಟಿಪಿ : 94, ದಿನಾಂಕ : 07-08-1995.
2. ಮಾನ್ಯ ಮುಖ್ಯ ಮಂತ್ರಿಯವರ ಪತ್ರ ಸಂಖ್ಯೆ : ಮುಮಾಂ/439/ಅಕಾ/2012, ದಿನಾಂಕ : 16-04-2012.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 07-08-2009ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯತ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಮುಖ್ಯ ಮಂತ್ರಿಯವರ ಶಿಫಾರಸ್ಸಿನ ಮೇರೆಗೆ ಅನುಮೋದಿಸಿರುವಂತೆ ಹಾವೇರಿ ಜಿಲ್ಲೆಯ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 70 ಯೋವಿವಿ 2011, ಬೆಂಗಳೂರು, ದಿನಾಂಕ: 11ನೇ ಮೇ 2012**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಐದು (5) ಜನರನ್ನು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಲಾಗಿದೆ.

**ಹಾವೇರಿ ಜಿಲ್ಲೆ, ಜಿಲ್ಲಾ ಕೆ.ಡಿ.ಪಿ. ಸಮಿತಿಗೆ**

| ಕ್ರ. ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀಮತಿ ಮಂಜುಳಾ ಹನುಮಂತಪ್ಪ ಮೇಡ್ಲೆರಿ<br>ಸಾ : ಪೋ : ಕರೂರು, ರಾಣಿಬೆನ್ನೂರು ತಾಲ್ಲೂಕು, ಹಾವೇರಿ ಜಿಲ್ಲೆ. | ಮಹಿಳೆ |
| 2 | ಶ್ರೀ ಪಾಲಾಕ್ಷಗೌಡ ಹ. ಪಾಟೀಲ,<br>ಸಾ : ಪೋ : ಮೇದೂರು, ಹಿರೇಕೆರೂರು ತಾಲ್ಲೂಕು, ಹಾವೇರಿ ಜಿಲ್ಲೆ. | ಸಾಮಾನ್ಯ |
| 3 | ಶ್ರೀ ಹೊನ್ನಪ್ಪ ದ್ಯಾ. ಎಲಿಗಾರ<br>ಸಾ : ಪೋ : ಕಾಟೇನಹಳ್ಳಿ, ಹಾವೇರಿ ತಾಲ್ಲೂಕು ಮತ್ತು ಜಿಲ್ಲೆ. | ಎಸ್.ಟಿ. |
| 4 | ಶ್ರೀ ಪ್ರಕಾಶ್ ಈ. ಬಡೀಗೇರ,<br>ಸಾ : ಪೋ : ನೀರಲಾಗಿ, ಶಿಗ್ಗಾಂವ, ಹಾವೇರಿ ಜಿಲ್ಲೆ. | ಬಿ.ಸಿ.ಎಂ. |
| 5 | ಶ್ರೀ ಸಯ್ಯದ್ ಮಹಮ್ಮದ್ ಅಶ್ರಫ್ ಬಿನ್ ಸಯ್ಯದ್ ಮೊಹಿದ್ದೀನ್ ಖಾಜಿ, ವಕೀಲರು,<br>ಶಿವಾಜಿನಗರ, ಹಾವೇರಿ ತಾಲ್ಲೂಕು ಮತ್ತು ಜಿಲ್ಲೆ. | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಉಮಾಪತಿ,**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಪಿ.ಆರ್. 1423**

## ಸಹಕಾರ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಇ 26 ಸಸಂನೋ 2011, ಬೆಂಗಳೂರು, ದಿನಾಂಕ: 07ನೇ ಮೇ, 2012.**

ಸರ್ಕಾರದ ಆದೇಶ ಸಂಖ್ಯೆ : ಸಇ 26 ಸಸಂನೋ 2011 ದಿನಾಂಕ : 30/03/2012ರ ಆದೇಶ ಭಾಗದ 4ನೇ ಸಾಲಿನಲ್ಲಿರುವ **"ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ ಮಂಡ್ಯ ಜಿಲ್ಲೆ"** ಎಂಬುದಕ್ಕೆ ಬದಲಾಗಿ **"ಸಹಕಾರ ಸಂಘಗಳ ಸಹಾಯಕ ನಿಬಂಧಕರು ಪಾಂಡವಪುರ ಉಪ ವಿಭಾಗ, ಪಾಂಡವಪುರ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು. ಸದರಿ ಆದೇಶದಲ್ಲಿನ ಇನ್ನುಳಿದ ಅಂಶಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ. ಎಸ್. ವಿಶ್ವೇಶ್ವರಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ-2
ಸಹಕಾರ ಇಲಾಖೆ.

**ಪಿ.ಆರ್. 1371**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಮಂಡ್ಯ ಜಿಲ್ಲೆಯ ಮಕ್ಕಳ ಕಲ್ಯಾಣ ಸಮಿತಿಯನ್ನು ತಾತ್ಕಾಲಿಕವಾಗಿ ಅಮಾನತ್ತಿನಲ್ಲಿರಿಸುವ ಕುರಿತು.

**ಓದಲಾಗಿದೆ :** 1. ದಿನಾಂಕ : 13-10-2010ರ ಆದೇಶ ಸಂ. : ಮಮಇ 206, ಮಭಾಬ 2010.

2. ದಿನಾಂಕ : 12-03-2012ರ ಕರ್ನಾಟಕ ರಾಜ್ಯ ಸಮಗ್ರ ಮಕ್ಕಳ ರಕ್ಷಣಾ ಸೊಸೈಟಿಯ ಸದಸ್ಯ ಕಾರ್ಯದರ್ಶಿಯವರ ಪತ್ರ ಸಂ.ಕೆ.ಎಸ್.ಐ.ಸಿ.ಪಿ.ಎಸ್ : ಸಿಎನ್‌ಸಿಪಿ : 89 : 2010-11.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ, 2000, ತಿದ್ದುಪಡಿ 2006 ಸೆಕ್ಷನ್ 4 ಮತ್ತು 29 ರಡಿ ಮಂಡ್ಯ ಜಿಲ್ಲೆಯು ಸೇರಿದಂತೆ 28 ಜಿಲ್ಲೆಗಳ ಒಟ್ಟು 29 ಮಕ್ಕಳ ಕಲ್ಯಾಣ ಸಮಿತಿಗಳಿಗೆ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಿ ಆದೇಶ ಹೊರಡಿಸಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಬಾಲಕಿ ಪ್ರಿಯಾಂಕ 13 ವರ್ಷ ಇವಳನ್ನು ಬಾಲಕಿಯರ ಬಾಲಮಂದಿರ ಮಂಡ್ಯ ಇಲ್ಲಿಂದ ಬಿಡುಗಡೆಗೊಳಿಸುವ ಸಂಬಂಧ ಬಾಲಕಿಯ ಸೋದರ ಮಾವನ ಬಳಿ ಹಣ ನೀಡಬೇಕೆಂದು ಅಧ್ಯಕ್ಷರು, ಮಕ್ಕಳ ಕಲ್ಯಾಣ ಸಮಿತಿರವರು ಒತ್ತಾಯ ಮಾಡಿರುತ್ತಾರೆಂದು ಹಾಗೂ ಈಗಾಗಲೇ ಇತ್ಯರ್ಥ ಮಾಡಿರುವ ಪ್ರಕರಣಗಳನ್ನೂ ದುರುಪಯೋಗಪಡಿಸಿಕೊಂಡಿರುವುದಾಗಿ ತಿಳಿಸುತ್ತಾ, ಲಂಚ ಕೇಳುವ ಸಮಯದಲ್ಲಿ ಸಮಿತಿಯ ಸದಸ್ಯರುಗಳಿಗೆ ಹಣ ನೀಡಬೇಕೆಂದು ತಿಳಿಸಿರುತ್ತಾರೆ. ಇದರಿಂದಾಗಿ ಪ್ರಾಮಾಣಿಕವಾಗಿ ಮತ್ತು ದಕ್ಷತೆಯಿಂದ ಕಾರ್ಯನಿರ್ವಹಿಸುತ್ತಿಲ್ಲದಿರುವ ಬಗ್ಗೆ ಅವರಿಗೆ ಆರೋಪ ಬಂದಿರುವ ಹಿನ್ನೆಲೆಯಲ್ಲಿ ಈ ಬಗ್ಗೆ ತನಿಖೆ ಮಾಡಿ ಎಂದು ಕೋರಿರುತ್ತಾರೆ ಹಾಗೂ ಈ ಪ್ರಕರಣ ಇತ್ಯರ್ಥವಾಗುವವರೆಗೆ ಸಮಿತಿ ಕಲಾಪಗಳಲ್ಲಿ ಭಾಗವಹಿಸುವುದಿಲ್ಲವೆಂದು ತಿಳಿಸಿರುತ್ತಾರೆ ಎಂದು ತಿಳಿಸಿದ್ದಾರೆ.

ಉಪನಿರ್ದೇಶಕರು, ಮಂಡ್ಯ ಇವರು ಈ ಬಗ್ಗೆ ತನಿಖೆ ನಡೆಸಿ ವರದಿ ಸಲ್ಲಿಸುತ್ತಾ ಸಮಿತ ಅಧ್ಯಕ್ಷರು ಮತ್ತು ಸದಸ್ಯರುಗಳು ಆರೋಪ ಪ್ರತ್ಯಾರೋಪ ಮಾಡುತ್ತಾ, ಕಳೆದ 4 ವರ್ಷಗಳಲ್ಲಿ ಸಮಿತಿ ಸಭೆ ನಡೆಸಲೆಂದು ಅಧ್ಯಕ್ಷರು ಬಂದರೆ ಅವರು ಹೊರ ಹೋಗುವವರೆಗೆ ಯಾರೂ ಬಾರದಿದ್ದು, ಅಧ್ಯಕ್ಷರು ಹೋದ ನಂತರ ಉಳಿದ ಸದಸ್ಯರು ಸಭೆ ನಡೆಸುತ್ತಿರುವುದಾಗಿ ಕಂಡುಬಂದಿರುತ್ತದೆ. ಸದರಿ ಲಂಚ ಪ್ರಕರಣ ಇತ್ಯರ್ಥವಾಗುವವರೆಗೆ ಅಧ್ಯಕ್ಷರು ಭಾಗವಹಿಸುವ ಸಭೆಗಳಲ್ಲಿ ಭಾಗವಹಿಸುವುದಿಲ್ಲವೆಂದು ಮೂವರು ಸದಸ್ಯರು ಖಡಾ ಖಂಡಿತವಾಗಿ ತಿಳಿಸಿರುತ್ತಾರೆ. ಹೀಗಾಗಿ ಮಕ್ಕಳ ಕಲ್ಯಾಣ ಸಮಿತಿ ಕಾರ್ಯಕಲಾಪಗಳು ನಡೆಯದೇ ಮಕ್ಕಳ ಪ್ರಕರಣಗಳು ಇತ್ಯರ್ಥಗೊಳಿಸಲು ತೊಂದರೆಯಾಗುತ್ತಿರುವುದರಿಂದ, ಮಕ್ಕಳ ಕಲ್ಯಾಣ ಸಮಿತಿ ಸಮಸ್ಯೆ ಇತ್ಯರ್ಥವಾಗುವವರೆಗೆ ಮಂಡ್ಯ ಮಕ್ಕಳ ಕಲ್ಯಾಣ ಸಮಿತಿಯನ್ನು ಅಮಾನತ್ತಿನಲ್ಲಿರಿಸಿ ಮಕ್ಕಳ ಹಿತದೃಷ್ಟಿಯಿಂದ ಮಂಡ್ಯ ಜಿಲ್ಲೆಯ ಮಕ್ಕಳ ಕಲ್ಯಾಣ ಸಮಿತಿಯ ಕಾರ್ಯಕಲಾಪಗಳನ್ನು ನೋಡಿಕೊಳ್ಳಲು ಮೈಸೂರು ಜಿಲ್ಲೆಯ ಮಕ್ಕಳ ಕಲ್ಯಾಣ ಸಮಿತಿಗೆ ವಹಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲಾ ಮಕ್ಕಳ ಕಲ್ಯಾಣ ಸಮಿತಿಯನ್ನು ತಾತ್ಕಾಲಿಕವಾಗಿ ಅಮಾನತ್ತಿನಲ್ಲಿರಿಸಿ, ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಕಾಯ್ದೆ 2000 ತಿದ್ದುಪಡಿ 2006 ರನ್ವಯ ಹಾಗೂ ಬಾಲ ನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಕರ್ನಾಟಕ ನಿಯಮಾವಳಿಗಳು 2010 ರನ್ವಯ ಮಕ್ಕಳ ಪ್ರಕರಣಗಳನ್ನು ನಿರ್ವಹಿಸಲು ತಾತ್ಕಾಲಿವಾಗಿ ಮಕ್ಕಳ ಕಲ್ಯಾಣ ಸಮಿತಿ ಮೈಸೂರು ಇವರಿಗೆ ಅನುಮತಿ ನೀಡುವಂತೆ ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಸಮಗ್ರ ಮಕ್ಕಳ ರಕ್ಷಣಾ ಸೊಸೈಟಿ ಇವರು ಕೋರಿರುತ್ತಾರೆ.

**ಆದೇಶ ಸಂಖ್ಯೆ: ಮಮಇ 23 ಮಭಾಬ 2012, ಬೆಂಗಳೂರು, ದಿನಾಂಕ: 09-05-2012**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ 2000, ತಿದ್ದುಪಡಿ 2006 ರನ್ವಯ ಮಂಡ್ಯ ಜಿಲ್ಲೆಯ ಮಕ್ಕಳ ಕಲ್ಯಾಣ ಸಮಿತಿಯನ್ನು ತಾತ್ಕಾಲಿಕವಾಗಿ ಅಮಾನತ್ತಿನಲ್ಲಿರಿಸಿ, ಸದರಿ ಜಿಲ್ಲೆಯ ಮಕ್ಕಳ

ಪ್ರಕರಣಗಳನ್ನು ನಿರ್ವಹಿಸಲು ತಾತ್ಕಾಲಿಕವಾಗಿ ಮಕ್ಕಳ ಕಲ್ಯಾಣ ಸಮಿತಿಯನ್ನು ಮೈಸೂರು ಜಿಲ್ಲೆ ವ್ಯಾಪ್ತಿಗೆ ಒಳಪಡಿಸಿ ಸದರಿ ಪ್ರಕರಣಗಳನ್ನು ನಿರ್ವಹಿಸಲು ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿಜಯಲಕ್ಷ್ಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಪಿ.ಆರ್. 1373**

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಡಾ॥ ಮಂಜುನಾಥ ಬಸರೆಡ್ಡಿ, ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಅಚನೂರ, ಬಾಗಲಕೋಟೆ ತಾಲ್ಲೂಕು, ಇವರು ಪಶುವೈದ್ಯಾಧಿಕಾರಿ ಹುದ್ದೆಗೆ ರಾಜೀನಾಮೆ ನೀಡಿರುವ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ : ಆಪಸಂ/ಸಿ-2/ವಿವ-172/2011-12, ದಿನಾಂಕ : 14-03-2012.

**ಪ್ರಸ್ತಾವನೆ :**

ಡಾ॥ ಮಂಜುನಾಥ ಬಸರೆಡ್ಡಿ, ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಅಚನೂರ, ಬಾಗಲಕೋಟೆ ತಾಲ್ಲೂಕು ಇವರ ವೈಯಕ್ತಿಕ ಕಾರಣದ ಮೇಲೆ ದಿನಾಂಕ : 01-02-2012 ರಿಂದ ಅನ್ವಯವಾಗುವಂತೆ ಪಶುವೈದ್ಯಾಧಿಕಾರಿ ಹುದ್ದೆಗೆ ರಾಜೀನಾಮೆಯನ್ನು ನೀಡಿದ್ದು, ಸದರಿ ಪಶುವೈದ್ಯಾಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ಇರುವುದಿಲ್ಲವೆಂದು, ಸರ್ಕಾರದಕ್ಕೆ ಅವರಿಂದ ಯಾವುದೇ ಬೇಬಾಕಿ ಬರಬೇಕಾಗಿಲ್ಲವೆಂದು, ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ವರದಿ ಮಾಡುತ್ತಾ, ಡಾ॥ ಮಂಜುನಾಥ ಬಸರೆಡ್ಡಿ, ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಅಚನೂರ, ಬಾಗಲಕೋಟೆ ತಾಲ್ಲೂಕು ಇವರು ಪಶುವೈದ್ಯಾಧಿಕಾರಿ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ : 01-02-2012 ರಿಂದ ಅಂಗೀಕರಿಸುವಂತೆ ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಒದಗಿಸಲಾಗಿರುವ ದಾಖಲೆಗಳೊಂದಿಗೆ ಪರಿಶೀಲಿಸಿ, ಡಾ॥ ಮಂಜುನಾಥ ಬಸರೆಡ್ಡಿ, ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಅಚನೂರ, ಬಾಗಲಕೋಟೆ ತಾಲ್ಲೂಕು, ಇವರ ರಾಜೀನಾಮೆಯನ್ನು ದಿನಾಂಕ : 01-02-2012 ರಿಂದ ಅನ್ವಯಿಸುವಂತೆ ಅಂಗೀಕರಿಸಲು ತೀರ್ಮಾನಿಸಿ ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 61 ಪಸಸೇ 2012, ಬೆಂಗಳೂರು, ದಿನಾಂಕ: 4ನೇ ಮೇ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಡಾ॥ ಮಂಜುನಾಥ ಬಸರೆಡ್ಡಿ, ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಅಚನೂರ, ಬಾಗಲಕೋಟೆ ತಾಲ್ಲೂಕು, ಇವರ ರಾಜೀನಾಮೆಯನ್ನು ದಿನಾಂಕ : 01-02-2012 ರಿಂದ ಅನ್ವಯವಾಗುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಪ್ರಸನ್ನ,**
ಪೀಠಾಧಿಕಾರಿ-2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ-ಎ)

**ಪಿ.ಆರ್. 1375**

## REVENUE SECRETARIAT

**Sub**: Constitution of a committee to evaluate the usability of BBMP data created for urban properties in Bangalore.

**Read**: 2. JDLR (UPOR) Letter No. UPOR 1 (BNG)/12-13, Dated 9$^{th}$ May 2012.

**Preamble:**

The Urban Property Ownership Records project was started in December, 2009 in five towns namely Mysore, Hubli-Dharwar, Shimoga Bellary and Mangalore. The project is a citizen centric initiative taken up by Revenue Department of Government of Karnataka Under the scope of the project, spatial and non-spatial database of all urban prosperities are being created. While spatial data comprises location details such as maps and coordinates, non-spatial data associated with every urban property would include details of ownership, bank charges, court orders and mutation. Property related services shall be delivered to citizens over the created database.

Further it is now proposed to take up the Urban Property Ownership Records Project in Bangalore. BBMP has created a database of urban properties in Bangalore city for purpose of tax collections, Need has been felt that the data created by BBMP

should be utilized in UPOR project to the maximum extent possible. Vide letter read above the Joint Director of Land Records (UPOR) has requested to constitute a committee for evaluation of the usability of BBMP date for UPOR project and also the collaboration which would enable maximum use of this database. The committee will also decide as to what maximum extent the BBMP data can be utilized in UPOR project. Hence, the following order.

**GOVERNMENT ORDER NO. RD 45 MRR 2012, BANGALORE, DATED: 11th MAY 2012.**

Sanction is accorded to constitute a committee with the following members to evaluate the usability of BBMP data created for Urban Properties in Bangalore under Urban Property Ownership Records Project.

| | |
|---|---|
| 1. The Deputy Secretary to Government and ex-officio Director (Bhoomi & UPOR), Revenue Department. | Chairman |
| 2. The Deputy Director General and State Informatics Officer, National Informatics Centre, Bangalore or his representative. | Member |
| 3. The Chief Executive Officer, Centre, for e-Governance or his representative. | Member |
| 4. The Joint Secretary to Government, Urban Development Department | Member |
| 5. The Director, National Spatial Data Infrastructure, Karnataka Unit | Member |
| 6. Prof. Ramanathan, ISRO Bangalore | Member |
| 7. Shri Ramakanth, Deputy Commissioner (Revenue), BBMP | Member |
| 8. Shri Rudraiah, Advior Town Planning. | Member |
| 9. The Joint Director of Land Records (UPOR), Revenue Department | Member Secretary and Convenor |

2. The Committee within 15 days shall evaluate and recommend to Government in Revenue Department (Bhoomi & UPOR) on the following parameters.

a. The usability of BBMP data created for Urban Properties in Bangalore.

b. The maximum extent of the BBMP data that can be utilized in UPOR project.

c. The collaboration between UPOR authorities and BBMP which would require enable maximum use of this database.

By Order and in the name of Governor of Karnataka,

**B. SOMASHEKAR,**

Under Secretary to Government (Bhoomi & UPOR),

Revenue Department,

**P. R. 1392**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸಚಿವಾಲಯದ ಪಶು ಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯಲ್ಲಿ ವೇತನ ಶ್ರೇಣಿ ರಹಿತ ಒಂದು ವಿಶೇಷ ಕರ್ತವ್ಯಾಧಿಕಾರಿ ಹುದ್ದೆ ಸೃಜಿಸುವ ಬಗ್ಗೆ.

**ಓದಲಾಗಿದೆ :** ಕಡತ ಸಂಖ್ಯೆ : ಸಿಆಸುಇ 67 ಸೇಇಮು 2012, ದಿನಾಂಕ : 18–05–2012.

**ಪ್ರಸ್ತಾವನೆ:–**

ಮೇಲೆ ಓದಲಾದ ಕಡತದಲ್ಲಿ ಪ್ರಸ್ತುತ ಮೀನುಗಾರಿಕೆ ಇಲಾಖೆಯ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿರುವ ಡಾ॥ ಹೆಚ್. ಎಸ್. ವೀರಪ್ಪಗೌಡ, ರವರನ್ನು ಇಲಾಖಾ ಮುಖ್ಯಸ್ಥರ ಹುದ್ದೆಯಿಂದ ತೆರವುಗೊಳಿಸಿ ಇವರನ್ನು ಸಚಿವಾಲಯದ ಪಶು ಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯ ವ್ಯಾಪ್ತಿಯಲ್ಲಿ ಮೀನುಗಾರಿಕೆ ವಿಭಾಗದ ಉಸ್ತುವಾರಿ ನೋಡಿಕೊಳ್ಳಲು ವಿಶೇಷ ಕರ್ತವ್ಯಾಧಿಕಾರಿ ಹುದ್ದೆಗೆ ನೇಮಿಸಲು ಪ್ರಸ್ತಾಪಿಸಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 303 ಸಅಸೇ 2012, ಬೆಂಗಳೂರು, ದಿನಾಂಕ : 21ನೇ ಮೇ 2012**

ಪ್ರಸ್ತಾವನೆಯನ್ನು ಪರಿಶೀಲಿಸಿ ಸಚಿವಾಲಯದ ಪಶು ಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯ ವ್ಯಾಪ್ತಿಯಲ್ಲಿ ಮೀನುಗಾರಿಕೆ ವಿಭಾಗದ ಉಸ್ತುವಾರಿ ನೋಡಿಕೊಳ್ಳಲು ವೇತನ ಶ್ರೇಣಿ ರಹಿತ ಒಂದು ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಸೃಜಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 457 ವೆಚ್ಚ–12/2012. ದಿನಾಂಕ : 15–05–2012ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಕೆ. ಲಕ್ಷ್ಮೀನಾರಾಯಣರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**ಪಿ.ಆರ್. 1451**

## COMMERCE AND INDUSTRIES SECRETARIAT

**Sub :** Approval to the Project proposal of M/s. Summit Developments Pvt. Ltd. to establish ``IT Park/Commercial with residential and supporting facilities catering to the requirements of SME Sector of IT/ITES/BPO Industry'' project at Tharahunse Village, Jala Hobli, Bangalore North Taluk, Bangalore Rural District-Reg.

**Read :** Proceedinge of 27th SHLCC meeting held on 13-04-2012.

**Preamble :**

M/s. Summit Developments Pvt. Ltd. , proposes to establish ``IT Park/Commercial with residential and supporting facilities catering to the requirements of SME Sector of IT/ITES/BPO Industry'' project at Tharahunse Village, Jala Hobli, Bangalore North Taluk, Bangalore Rural District with an investiment of Rs. 4551 crores generating employment to about 3 lakh persons.

In the 27th State High Level Clearance Committee (SHLCC) Meeting held on 13-04-2012, the proposal of the Company was discussed and approved.

Government has examined the recommendations made by the State High Level Clearance Committee in the 27th Meeting held on 13-04-2012, in all aspects.

Hence the following order.

**GOVERNMENT ORDER NO. CI 139 SPI 2012, BANGALORE, DATED 23-04-2012.**

Government is pleased to approve in-principle the proposal of of M/s. Summit Developments Pvt. Ltd. to establish ``IT Park/Commercial with residential and supporting facilities catering to the requirements of SME Sector of IT/ITES/BPO Industry'' project at Tharahunse Village, Jala Hobli, Bangalore North Taluk, Bangalore Rural District with an investment of Rs. 4551 crores generating employment to about 3 lakh persons by extending the infrastructure facilities, incentives & concessions as mentioned below :

**Land :** 216 acres 4 guntas of land to be acquired by KIADB and allotted as SUC at Sy. Nos. 223/1 (202.02 acres), 223/2 (12.12 acres) & 149/2 (3.30 acres) at Tharahunse Village, Jala Hobli, Bangalore Rural District.

Principal Secretary to Government, Revenue Department vide letter (No. RD 687 LBG 2011 dated 12-04-2012) has forwarded the report of Deputy Commissioner, Bangalore Urban District (letter No. LND/NA/CR/10/2011-12 dated 19-01-2012) and opined as under :

``There is no violation either under Land Grant Rules, 1969 or under Land Reforms Act 1961 – This subject land is in the green belt. Since the project proposed is for IT Park (including Commercial and Housing) the proponent shall obtain permission/clearances form the appropriate Authorities. Thereafter to obtain

change of land use under the existing Acts/Rules from the appropriate Planning authority'' and thereafter to obtain approval from the Government''.

The project proponent to submit consent (80% of the extent of land) from the owners.

The extent of the land required by the project to be assessed by the Land Audit Committee.

**Water :** ----

**Power :** ----

**Environmental Clearance:-** Promoters to obtain CFE from KSPCB, Environmental Clearance from MOEF, GOI/DFEE GOK as applicable

**Statutory clearances :- .** The Promoters to take necessary statutory clearances.

**Incentives & Concessions :-**As per applicable IT Policy of the State

**GENERAL TERMS AND CONDITIONS :**

1. **Environment :-**The promoters to obtain CFE and CFO from KSPCB and environmental clearance from MOEF, GOI.
2. **Employment :-**The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
3. **Vendor Development :-** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
4. **Social Infrastructure Development : -**The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
5. **Others :** a) The project proponents shall adopt rainwater harvesting, waste water recycling and water conservation techniques. Zero discharge facility should be adopted wherever applicable.

   b) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

The Order is valid for the period of two years from the date of allotment by KIADB.

By Order and in the name of the Governor of Karnataka,

**JYOTHI R. J.**

Desk Officer (Technical Cell)

Commerce & Industries Department.

**P.R. 1458**

## COMMERCE AND INDUSTRIES SECRETARIAT

**Sub :** Amendment to earlier approved project proposal of M/s. Honda motorcycle and Scooter India Pvt. Ltd., to establish ``Two Wheeler Manufacturing Plant-Unit 1``, at Narasapura Industrial Area, Kolar District-Reg.

**Read :** 1. $25^{th}$ SHLCC meeting held on 18-08-2011.

2. Government Order No. CI 188 SPI 2011, dated : 22-08-2011.

3. Proceedings of $27^{th}$ SHLCC meeting held on 13-04-2012.

